# ಚಂದ್ರಗುಪ್ತನ ಭಾಗ್ಯ

ಆಸ್ಥಾನ ವಿದ್ವಾನ್

**ಎಮ್. ಜಿ. ನಂಜುಂಡಾರಾಧ್ಯ**

ಮತ್ತು

**ಪಂಡಿತ ಎಸ್. ಚಿಕ್ಕಣ್ಣ**

ಪ್ರಕಾಶಕರು :




119, 14ನೇ ಕ್ರಾಸ್, : : ಮಲ್ಲೇಶ್ವರಂ, ಬೆಂಗಳೂರು-3

ಬೆಲೆ : ರೂ. **0-94**

ದ್ವಿತೀಯ ಮುದ್ರಣ : 1962. 11,000 ಪ್ರತಿಗಳು

## ಕೃತಜ್ಞತೆ

ಈ ಪುಸ್ತಕವನ್ನು **ಮೈಸೂರು, ಮಂಡ್ಯ, ಕೊಡಗು** ಮತ್ತು **ದಕ್ಷಿಣ ಕನ್ನಡ** ಜಿಲ್ಲೆಗಳಿಗೆ ಹೊಸ ಹತ್ತನೆಯ ತರಗತಿಯ ನಾನ್‌ಡಿಟೈಲ್ ಪಠ್ಯಪುಸ್ತಕವಾಗಿ ಅಂಗೀಕರಿಸಿದುದಕ್ಕಾಗಿ ಪಠ್ಯಪುಸ್ತಕ ಸಮಿತಿಯವರಿಗೂ, ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳಿಗೂ ನಾವು ಕೃತಜ್ಞರು.

—ಲೇಖಕರು.

ಮುದ್ರಕರು :
**ಸೂಪರ್ ಪ್ರಿಂಟರ್ಸ್**
ಚಿಕ್ಕಪೇಟೆ : : ಬೆಂಗಳೂರು-2

# ಮುನ್ನುಡಿ

ಕನ್ನಡ ಸಾಹಿತ್ಯಭಂಡಾರದಲ್ಲಿ ಬೆಳಗುತ್ತಿರುವ ಕಾವ್ಯರತ್ನಗಳಲ್ಲಿ ಮುದ್ರಾಮಂಜೂಷವೂ ಒಂದಾಗಿದೆ. ಈ ಗದ್ಯಕಾವ್ಯವು ಮೈಸೂರು ಅರಸರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ ಕೆಂಪುನಾರಾಯಣ ಕವಿಯಿಂದ ರಚಿತವಾಗಿದೆ. ಈತನ ಕಾಲ ಕ್ರಿ.ಶ. ೧೮೨೩. ಗ್ರಂಥವು ವಿಸ್ತಾರವಾಗಿಯೂ ಪ್ರೌಢವಾಗಿಯೂ ಇರುವುದು. ಈ ಪ್ರೌಢಕಾವ್ಯದ ಪ್ರಯೋಜನ ಬಹುಜನರಿಗೆ ಉಂಟಾಗಲೆಂಬ ಉದ್ದೇಶದಿಂದ ಇದನ್ನು ಸಂಗ್ರಹವಾಗಿಯೂ ಸರಳವಾಗಿಯೂ ಬರೆಯಲಾಗಿದೆ. ಒಂದೇ ದೇಹ; ಉಡಿಗೆತೊಡಿಗೆಗಳಲ್ಲಿ ಕೊಂಚ ಮಾರ್ಪಾಟು ಅಷ್ಟೆ.

ದಂಡನೀತಿಶಾಸ್ತ್ರದಲ್ಲಿ ಅದ್ವಿತೀಯನಾದ ಚಾಣಕ್ಯನು ದುಷ್ಟರಾದ ನಂದರನ್ನು ತನ್ನ ತಂತ್ರಬಲದಿಂದ ನಿಗ್ರಹಿಸಿ, ತನ್ನನ್ನು ಆಶ್ರಯಿಸಿದ ಚಂದ್ರಗುಪ್ತನನ್ನು ಗೌಡರಾಜ್ಯಕ್ಕೆ ದೊರೆಯನ್ನಾಗಿ ಮಾಡಿ, ನಂದಪ್ರಭುಗಳಿಗೆ ಮಂತ್ರಿಯಾಗಿದ್ದ ಮಂತ್ರಿಶ್ರೇಷ್ಠನಾದ ಅಮಾತ್ಯರಾಕ್ಷಸನನ್ನು ಅಮಾತ್ಯ ಪದವಿಯಲ್ಲಿ ನಿಲ್ಲಿಸಿ ತಪಸ್ಸಿಗೆ ತೆರಳಿದ ವಿಷಯ ಪ್ರತಿಪಾದನೆಯೇ ಇಲ್ಲಿಯ ಕಥಾವಸ್ತು.

ಈ ಗ್ರಂಥದಲ್ಲಿ ದಂಡನೀತಿಗೆ ಪ್ರಾಧಾನ್ಯತೆಯಿದ್ದರೂ ಇದು ಲೋಕವ್ಯವಹಾರಜ್ಞಾನವನ್ನು ಹೆಚ್ಚಿಸಲು ಅತ್ಯಂತ ಉಪಯುಕ್ತ ಕಾವ್ಯವೆಂದು ಪ್ರಸಿದ್ಧವಾಗಿದೆ. ಪ್ರತಿಯೊಬ್ಬ ಕನ್ನಡಿಗನೂ ಓದಲೇಬೇಕಾದ ಗ್ರಂಥ. ಅದರಲ್ಲೂ ಯುವಕರಿಗೆ ಹೆಚ್ಚು ಉಪಯುಕ್ತವಾದುದು. ವಿದ್ಯಾರ್ಥಿಗಳು ತಮ್ಮ ಭಾಷಾಜ್ಞಾನವನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಲೋಕವ್ಯವಹಾರ ಜ್ಞಾನವನ್ನೂ ತಿಳಿಯಲು ಅನುಕೂಲವಾಗಿದೆ. ಪುಸ್ತಕವನ್ನು ಆರು ಪ್ರಕರಣಗಳಲ್ಲಿ ವಿಷಯ ವಿಭಾಗಗಳ ಮೂಲಕ ವಿವರಿಸಿರುವುದರಿಂದ ಓದುಗರಿಗೆ ತೊಡಕಿಲ್ಲದೆ ವಿಷಯ ಗ್ರಹಣೆಯು ಸುಲಭವಾಗಿ ಆಗುವುದರಲ್ಲಿ ಸಂಶಯವಿಲ್ಲ.

ಲೇಖಕರು.

# ವಿಷಯ ಸೂಚಿಕೆ

# ಪ್ರಕರಣ ೧

[ಸಂತಾನಾಭ್ಯುದಯ. ಮಾತ್ಸರ್ಯದ ಪರಿಣಾಮ. ಬಂಧವಿಮೋಚನೆ]

ದಿನಮಣಿಯು ತನ್ನ ದಿನದ ಯಾತ್ರೆಯನ್ನು ಮುಗಿಸಿ ವಿಶ್ರಾಂತಿಗೆಂದು ಪಡುವಣ ದಿಗಂತವನ್ನು ಸಮೀಪಿಸಿದ್ದನು. ಕ್ರಮಕ್ರಮವಾಗಿ ಅರುಣವರ್ಣದ ಕಿರಣಗಳನ್ನು ತನ್ನಲ್ಲಿ ಉಡುಗಿಸಿಕೊಂಡ ರವಿಬಿಂಬವು ಪಶ್ಚಿಮ ದಿಗಂಗನೆಯು ಧರಿಸಿದ ಕುಂಕುಮದ ಬೊಟ್ಟಿನಂತೆ ಕಂಗೊಳಿಸುತ್ತಿತ್ತು. ಸಂಧ್ಯಾರಾಗದಿಂದ ರಂಜಿತವಾದ ಆಗಸವು ಆಕೆಯು ಧರಿಸಿದ ಕೇಸರೀವರ್ಣದ ದುಕೂಲದಂತೆ ಶೋಭಿಸುತ್ತಿತ್ತು. ಪಕ್ಷಿಸಂಕುಲವು ಮಂಜುಳ ಧ್ವನಿಗೈಯುತ್ತ ತಮ್ಮ ಗೂಡಿನತ್ತ ತೆರಳುತ್ತಿದ್ದುವು. ಮೇಯಲು ಹೋಗಿದ್ದ ತುರುಗಳು ತಮ್ಮ ಕರುಗಳನ್ನು ನೆನೆದು ಕೂಗುತ್ತ ತುಂಬಿದ ಕೆಚ್ಚಲ ಭಾರವನ್ನು ಹೊತ್ತು ದೊಡ್ಡಿಗೆ ಹಿಂದಿರುಗುತ್ತಿದ್ದುವು. ಪಟ್ಟಣಿಗರು ತಮ್ಮ ಕೆಲಸಗಳಿಂದ ವಿರಾಮಹೊಂದಿದವರಾಗಿ ಮನೆಗಳ ಕಡೆ ಬರುತ್ತಿದ್ದರು. ಅಷ್ಟರಲ್ಲಿ ದಿವಾಕರನು ಅಸ್ತಂಗತನಾಗಲು ಕತ್ತಲೆ ಮೆಲ್ಲಮೆಲ್ಲನೆ ಸುತ್ತಲೂ ಆವರಿಸಿತು. ಸೀಮಂತಿನಿಯರು ಹತ್ತಿಸಿಟ್ಟ ಸೊಡರುಗಳು ಮನೆಮನೆಗಳನ್ನು ಬೆಳಗಲು, ಗಗನದಲ್ಲಿ ಕಿರುತಾರೆಗಳು ಮಿಣುಗಿದುವು. ಪವಿತ್ರವಾದ ಗಂಗಾನದಿ ಪ್ರಶಾಂತವಾಗಿ ಹರಿಯುತ್ತಿತ್ತು.

ನದಿಯ ದಡದಲ್ಲಿಯೇ ಗೌಡದೇಶಕ್ಕೆ ರಾಜಧಾನಿಯಾಗಿ ಪ್ರಖ್ಯಾತವಾದ ಪಾಟಲೀಪುರವು ಮೆರೆಯುತ್ತಿದ್ದಿತು. ಹೂಗಿಡಗಳಿಂದ ಕಂಗೊಳಿಸುತ್ತಿದ್ದ ಆ ನಗರಕ್ಕೆ ಕುಸುಮಪುರವೆಂಬ ಹೆಸರೂ ಅನ್ವರ್ಥನಾಮದಂತೆ ಬಂದಿದ್ದಿತು. ಆ ಪುರದ ಮಧ್ಯಭಾಗದಲ್ಲಿ ನಿರ್ಮಿತವಾಗಿದ್ದ ವಿಶಾಲ ರಾಜಭವನವು ಅತ್ಯಂತ ಮನೋಹರವಾಗಿ ಶೋಭಿಸುತ್ತಿತ್ತು. ಬಣ್ಣ ಬಣ್ಣದ ಗಾಜಿನ ಬುರುಡೆಗಳಲ್ಲಿ ಹತ್ತಿಸಿಟ್ಟ ದೀಪಮಾಲೆಗಳು ಆ ಅರಮನೆಯ ಅಂದವನ್ನು ಮತ್ತಷ್ಟು ಬೆಳಗುತ್ತಿದ್ದುವು. ಸುತ್ತಲೂ ಬಗೆಬಗೆಯ ಹೂಗಿಡಗಳಿಂದ ಕೂಡಿದ ಉದ್ಯಾನ ;

ಕರಿಯ ಕಲ್ಲಿನ ಸೋಪಾನಗಳು; ಅಮೃತಶಿಲೆಯ ಕಂಬಗಳು; ಚಿತ್ರವಿಚಿತ್ರವಾದ ದಂತದ ಕೆತ್ತನೆ ಕೆಲಸದಿಂದ ರಂಜಿಸುವ ಕಿಟಕಿಬಾಗಿಲುಗಳು. ವಿಶಾಲವಾದ ಅಂಗಳದಿಂದ ಒಳಗೆ ಪ್ರವೇಶಿಸಿದರೆ ಮುಂಭಾಗದಲ್ಲಿ ಅಲಂಕೃತವಾದ ಸಭಾಮಂಟಪ; ಒಂದು ಕಡೆ ಕಲ್ಯಾಣಮಂಟಪ; ಮತ್ತೊಂದು ಕಡೆ ವಿಹಾರ ಮಂಟಪ; ಅಲ್ಲಲ್ಲಿ ಸುಸಜ್ಜಿತವಾದ ಕೊಠಡಿಗಳು; ಬಿಳಿಯ ಕಲ್ಲಿನ ಮೆಟ್ಟಿಲುಗಳನ್ನು ಹತ್ತಿ ಮೇಲೆ ಹೋದರೆ ಇನ್ನೂ ಹೆಚ್ಚು ಬೆಲೆ ಬಾಳುವ ವಸ್ತುಗಳಿಂದ ಕೂಡಿ ಮೆರೆಯುವ ಉಪ್ಪರಿಗೆ; ಸಭಾಮಂಟಪದಷ್ಟೇ ವಿಶಾಲವಾದ ಸೊಗಸಾದ ಮೊಗಸಾಲೆ.

ಹೀಗೆ ಕಣ್ಮನಗಳನ್ನು ಸೆಳೆಯುತ್ತಿದ್ದ ರಾಜಮಂದಿರದ ಆ ಮೊಗಸಾಲೆಯಲ್ಲಿ ಹಾಕಿದ್ದ ರತ್ನಪೀಠದ ಮೇಲೆ ಆ ಸಂಧ್ಯಾಸಮಯದಲ್ಲಿ ಸರ್ವಾರ್ಥಸಿದ್ಧಿ ಮಹಾರಾಜನು ಮಂಡಿಸಿದ್ದನು. ಪರಿಜನರು ಅಲ್ಲಲ್ಲಿ ಕೈಜೋಡಿಸಿ ನಿಂತಿದ್ದರು. ಆಗ ಉಚಿತ ಉಡಿಗೆತೊಡಿಗೆಗಳಿಂದ ಅಲಂಕೃತನಾದ ಮಂತ್ರಿಮುಖ್ಯನಾದ ಅಮಾತ್ಯರಾಕ್ಷಸನು ಅಲ್ಲಿಗೆ ಪ್ರವೇಶಿಸಿ, ಮಹಾರಾಜನಿಗೆ ವಂದಿಸಿ, ಹತ್ತಿರದಲ್ಲಿ ಹಾಕಿದ್ದ ಉಚಿತಾಸನದಲ್ಲಿ ಕುಳಿತುಕೊಂಡನು.

"ಅಮಾತ್ಯ, ಮಹರ್ಷಿಗಳ ಪಾದಸೇವೆಯಿಂದ ಈ ದಿವಸ ನನ್ನ ಮನಸ್ಸಿಗೆ ತುಂಬಾ ಸಂತೋಷವುಂಟಾಗಿದೆ. ನನ್ನ ಜನ್ಮ ಪಾವನವಾಯಿತು. ಅಪುತ್ರವಂತನೆಂಬ ನನಗಿದ್ದ ಕೊರತೆ ಕಳೆಯಿತಲ್ಲವೆ ?"

"ಪ್ರಭು, ಪವಿತ್ರವಾದ ಚಂದ್ರವಂಶವೃಕ್ಷವು ವೀತಿಹೋತ್ರ ಮಹರ್ಷಿಗಳ ಅನುಗ್ರಹದಿಂದ ಚಿಗುರಿತು. ಮಹಾರಾಜರು ಬಹುಪುತ್ರರಿಂದ ಕೂಡಿ ಮೆರೆಯುವುದನ್ನು ನೋಡಿ ಸಂತೋಷಪಡುವ ಭಾಗ್ಯ ಈ ಗೌಡದೇಶದ ಪ್ರಜೆಗಳಿಗೆ ಉಂಟಾಯಿತು."

"ನಮ್ಮ ಪುಣ್ಯವಶದಿಂದಲೇ ಈ ದಿವಸ ಮಹಾತೇಜಸ್ವಿಗಳೂ ಮಹಾನುಭಾವರೂ ಆದ ವೀತಿಹೋತ್ರ ಮುನಿಪೋತ್ತಮರು ಇಲ್ಲಿಗೆ ದಯಮಾಡಿಸಿದರು. ಮಹಾತ್ಮರನ್ನು ಮಣಿಪೀಠದಲ್ಲಿ ಕುಳ್ಳಿರಿಸಿ ಅರಸಿಯರೊಡನೆ ಭಕ್ತಿಯಿಂದ ಪಾದಪ್ರಕ್ಷಾಳನಾದಿ ಷೋಡಶೋಪಚಾರಗಳನ್ನು ಮಾಡಿದೆನು. ಅವರ ಪಾದೋದಕವನ್ನು ನನ್ನ ಶಿರಸ್ಸಿನ ಮೇಲೆ ಹಾಕಿಕೊಂಡು ಉಭಯ ರಾಣಿಯರ ಶಿರಸ್ಸಿನಮೇಲೂ ಪ್ರೋಕ್ಷಿಸಿದೆನು. ಆಗ ಪಟ್ಟಮಹಿಷಿಯಾದ ಸುನಂದಾದೇವಿಯ

ಶಿರದಲ್ಲಿ ಒಂಬತ್ತು ಬಿಂದುಗಳು ಕ್ಷಣಮಾತ್ರ ನಿಂತು ಕೂಡಲೆ ಕೆಳಗೆ ಬಿದ್ದುವು. ಪ್ರಿಯಪತ್ನಿಯಾದ ಮುರಾದೇವಿಯ ಶಿರದಲ್ಲಿ ಒಂದು ಬಿಂದು ಮಾತ್ರ ನಿಶ್ಚಲವಾಗಿ ನಿಂತಿತು. ಅದರ ಕಾರಣವೇನೆಂಬುದನ್ನು ತಿಳಿಯಬೇಕೆಂದು ಮನಸ್ಸು ಕಾತರಿಸಿತು. ಈಗಲೂ........"

"ಮಹಾರಾಜರೆ, ಮಹರ್ಷಿಗಳು ತಾವು ಕೇಳಿದ ಮಾತಿಗೆ, 'ರಾಜನೆ, ಅದರ ಕಾರಣವನ್ನು ಕೇಳುವುದು ಹಾಗಿರಲಿ. ಪುತ್ರಾಪೇಕ್ಷೆಯುಳ್ಳ ನಿನಗೆ ಬಿಂದುಗಳ ಲೆಕ್ಕದ ಪ್ರಕಾರವೇ ಸುನಂದಾದೇವಿಯಲ್ಲಿ ಒಂಬತ್ತು ಮಕ್ಕಳೂ ಮುರಾದೇವಿಯಲ್ಲಿ ಒಬ್ಬ ಮಗನೂ ಹುಟ್ಟುವರು' ಎಂದು ಅನುಗ್ರಹಮಾಡಿ ಆಶ್ರಮಕ್ಕೆ ತೆರಳಿದರಲ್ಲವೆ? ಅದಕ್ಕಾಗಿ ಕಳವಳಿಸಬೇಕಾದ ಕಾರಣವಿಲ್ಲ. ಮಹರ್ಷಿಗಳು ಪುಣ್ಯಕಾಲ ಸ್ನಾನಾರ್ಥವಾಗಿ ಕಾಶಿಗೆ ತೆರಳಿದ್ದು ಅಲ್ಲಿ ವಿಶ್ವೇಶ್ವರನ ಸೇವೆ ಮುಗಿಸಿಕೊಂಡು ಈ ಮಾರ್ಗವಾಗಿ ಬಂದುದರಿಂದ ನಮಗೆ ಅವರ ದರ್ಶನ ಭಾಗ್ಯವು ದೊರಕಿತು. ಮಹಾಪ್ರಭುಗಳು ಇನ್ನು ನಿಶ್ಚಿಂತೆಯಿಂದ ಇರಬಹುದು. ಮಹಾತ್ಮರ ವಚನವು ತಪ್ಪದೆ ಸಿದ್ಧಿಸುವುದು."

ಹೀಗೆ ಸಂಭಾಷಿಸುತ್ತಿರುವಲ್ಲಿ ಮೂಡಣ ದಿಶೆಯು ಕೆಂಪೇರಿತು. ತುಸ ಹೊತ್ತಿನಲ್ಲಿ ಪಾತಾಳದಿಂದ ಮೇಲಕ್ಕೆ ಬಂದ ಆದಿಶೇಷನ ಫಣಾಮಣಿಯೋ ಎಂಬಂತೆ ಚಂದ್ರೋದಯವಾಯಿತು. ಕ್ರಮಕ್ರಮವಾಗಿ ಬೆಳದಿಂಗಳು ಭೂಮ್ಯಾಕಾಶಗಳನ್ನು ವ್ಯಾಪಿಸಿತು. ಆ ಚಂದ್ರಿಕೆಯಿಂದುಂಟಾದ ಪ್ರಕೃತಿ ಸೌಂದರ್ಯವನ್ನು ಕಂಡು ಸರ್ವಾರ್ಥಸಿದ್ಧಿಮಹಾರಾಜನೂ ಅಮಾತ್ಯರಾಕ್ಷಸನೂ ಹಿಗ್ಗಿದರು. ವೇಳೆಯಾದುದರಿಂದ ಅಮಾತ್ಯನು ರಾಜನ ಅಪ್ಪಣೆ ಪಡೆದು ತನ್ನ ಗೃಹಕ್ಕೆ ತೆರಳಿದನು. ದೊರೆಯು ಅಂತಃಪುರವನ್ನು ಹೊಕ್ಕನು.

ಸರ್ವಾರ್ಥಸಿದ್ಧಿರಾಯನು ಚಂದ್ರವಂಶದ ಅರಸು. ಗೌಡದೇಶದ ರತ್ನ ಸಿಂಹಾಸನಾರೂಢನಾಗಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಆತನಿಗೆ ಸಕಲ ವಿದ್ಯಾಸಂಪನ್ನರೂ ಸೂಕ್ಷ್ಮಮತಿಗಳೂ ಆಗಿದ್ದ ವಕ್ರನಾಸನೇ ಮೊದಲಾದ ಅಷ್ಟಮಂತ್ರಿಗಳಿದ್ದರು. ಅವರಲ್ಲಿ ದಕ್ಷನಾದ ಅಮಾತ್ಯರಾಕ್ಷಸನು ಸಂಧಿವಿಗ್ರಹಿಯಾಗಿ ರಾಜಕಾರ್ಯದಲ್ಲಿ ರಾಜನಿಗೆ ಸಹಾಯಕನಾಗಿದ್ದನು. ಸದಾ ರಾಜನಿಗೆ ಶುಭವನ್ನೇ ಕೋರುತ್ತ ದೊರೆಯ ಪ್ರೀತಿಗೆ ಪಾತ್ರನಾಗಿದ್ದನು. ರಾಜ್ಯದಲ್ಲಿ ಸುಶಿಕ್ಷಿತವಾಗಿದ್ದ ಚತುರಂಗಸೇನೆಗೆ ಸಿಂಹಬಲನೇ ಮೊದಲಾದ ಅಷ್ಟ ಸೇನಾ

ನಾಯಕರಿದ್ದರು. ದೊರೆಗೆ ಯಾವ ಸುಖಕ್ಕೂ ಕೊರತೆಯಿಲ್ಲದಿದ್ದರೂ ಮಕ್ಕಳಿಲ್ಲದ ಚಿಂತೆ ಅನವರತವೂ ಅರಸನನ್ನು ಬಾಧಿಸುತ್ತಿತ್ತು. ವೀತಿಹೋತ್ರ ಮಹರ್ಷಿಗಳ ಅನುಗ್ರಹದಿಂದ ಆ ಚಿಂತೆಯೂ ದೂರವಾಯಿತು.

ಅನಂತರ ಕಾಲಕ್ರಮದಲ್ಲಿ ಮುನಿಯ ವರಪ್ರಸಾದದಿಂದ ರಾಜನ ಪ್ರಿಯ ಪತ್ನಿಯಾದ ಮುರಾದೇವಿಯು ಸುಮುಹೂರ್ತದಲ್ಲಿ ಸುಪುತ್ರನನ್ನು ಪಡೆದಳು. ದೊರೆಯ ಆನಂದಕ್ಕೆ ಪಾರವೇ ಇರಲಿಲ್ಲ. ಪಟ್ಟಣದಲ್ಲಿ ಉತ್ಸವವನ್ನು ಆಚರಿಸಿ ಪೌರರು ಆನಂದಭರಿತರಾದರು. ಬಡಬಗ್ಗರಿಗೆ ದಾನಧರ್ಮಗಳು ಯಥೇಚ್ಛವಾಗಿ ಕೊಡಲ್ಪಟ್ಟುವು. ದೇವಾಲಯಗಳಲ್ಲಿ ವಿಶೇಷ ಪೂಜೆ ನಡೆದುವು. ಭೂಸುರರು ಭೂರಿದಕ್ಷಿಣೆಗಳಿಂದ ತಣಿದರು. ಆ ರಾಜಪುತ್ರನಿಗೆ ಮೌರ್ಯನೆಂದು ನಾಮಕರಣ ಮಾಡಿದರು.

ಮತ್ತೆ ಕೆಲವು ಕಾಲಾನಂತರ ಪಟ್ಟದ ರಾಣಿಯಾದ ಸುನಂದಾದೇವಿಯೂ ಕ್ರಮವಾಗಿ ಒಂಬತ್ತು ಮಕ್ಕಳ ಜನನಿಯಾದಳು. ಪುತ್ರೋತ್ಸವಗಳಿಂದ ಸಂತೋಷಭರಿತನಾದ ಸರ್ವಾರ್ಥಸಿದ್ಧಿರಾಜನು ಆ ರಾಜಕುಮಾರರಲ್ಲಿ ಮೊದಲನೆಯವನಿಗೆ ನಂದನೆಂದೂ ಎರಡನೆಯವನಿಗೆ ಸುನಂದನೆಂದೂ ಮೂರನೆಯವನಿಗೆ ಉಪನಂದನೆಂದೂ ನಾಲ್ಕನೆಯವನಿಗೆ ಪ್ರನಂದನೆಂದೂ ಐದನೆಯವನಿಗೆ ಲೋಕನಂದನೆಂದೂ ಆರನೆಯವನಿಗೆ ಕುನಂದನೆಂದೂ ಏಳನೆಯವನಿಗೆ ಪ್ರಿಯನಂದನೆಂದೂ ಎಂಟನೆಯವನಿಗೆ ಮಿತ್ರನಂದನೆಂದೂ ಒಂಬತ್ತನೆಯವನಿಗೆ ವಿನಂದನೆಂದೂ–ಹೀಗೆ ಎಲ್ಲರಿಗೂ ನಂದಶಬ್ದಸಹಿತವಾಗಿ ನಾಮಕರಣ ಮಾಡಿದನು. ರಾಜಕುಮಾರರ ಜನನದಿಂದ ಕುಸುಮಪುರವು ಆನಂದದಿಂದ ನಲಿಯಿತು.

ದಿನದಿನಕ್ಕೆ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದ್ದ ಕುಮಾರರನ್ನು ನೋಡಿ ಮಹಾರಾಜನೂ ರಾಣಿಯರೂ ಪೂರ್ಣಿಮಾಚಂದ್ರನ ದರ್ಶನದಿಂದ ಉಬ್ಬುವ ಕಡಲಿನಂತೆ ಸಂತೋಷದಿಂದಿರುತ್ತಿದ್ದರು. ರಾಜ್ಯವು ಸುಭಿಕ್ಷವಾಗಿತ್ತು. ಪ್ರಜೆಗಳು ನೆಮ್ಮದಿಯಿಂದಿದ್ದರು.

ಮೌರ್ಯನು ರಾಜಯೋಗ್ಯವಾದ ಸಕಲ ವಿದ್ಯೆಗಳನ್ನೂ ಕಲಿತು ಪ್ರವರ್ಧಮಾನಕ್ಕೆ ಬಂದನು. ದಿನದಿನಕ್ಕೆ ಪ್ರಬುದ್ಧನಾಗಿ ವಿನಯಾದಿ ಸದ್ಗುಣಗಳಿಂದ ಪರಿಪೂರ್ಣನಾಗಿದ್ದ ಆತನಿಗೆ ಸರ್ವಾರ್ಥಸಿದ್ಧಿರಾಜನು ಅನೇಕ ಕನ್ಯಾರತ್ನಗಳನ್ನು

ಮದುವೆ ಮಾಡಿಸಿ, ಎಲ್ಲಾ ಅಧಿಕಾರಗಳನ್ನೂ ಅವನೇ ನೋಡಿಕೊಳ್ಳುವಂತೆ ನೇಮಿಸಿದನು.

ಗುಣಪಕ್ಷಪಾತಿಯಾದ ಮೌರ್ಯನು ಅವರವರ ಯೋಗ್ಯತೆಯನ್ನು ನೋಡಿ ಉಚಿತವಾದ ಅಧಿಕಾರಗಳನ್ನು ಕೊಟ್ಟು ರಾಜಕಾರ್ಯವು ನಿರಾಂತಕವಾಗಿ ನಡೆಯುವಂತೆ ಮಾಡಿದನು. ಪರಂಪರೆಯಿಂದ ಶೂರರಾಗಿ ಬಂದ ಸಿಂಹಬಲ, ಬಾಗುರಾಯಣ, ಭದ್ರಪಟ, ಡಿಂಗಿರಾತ, ಬಲಗುಪ್ತ, ವಿಜಯವರ್ಮ, ಲೋಹಿತಾಕ್ಷ, ಪುಷ್ಪದತ್ತ-ಎಂಬುವರನ್ನು ಸೇನಾಪತಿಗಳನ್ನಾಗಿ ನೇಮಿಸಿದನು. ಅವರವರು ತಮ್ಮ ತಮ್ಮ ಕರ್ತವ್ಯಗಳನ್ನು ಉತ್ತಮವಾಗಿ ನಿರ್ವಹಿಸುತ್ತಿದ್ದರು. ಹೀಗೆ ಸಿಂಹಾಸನಾರೂಢನಾಗಿದ್ದ ತಂದೆಗೆ ಆಯಾಸವಿಲ್ಲದಂತೆ ಮೌರ್ಯನು ರಾಜ್ಯ ವಿಚಾರಗಳನ್ನು ಬಹಳ ದಕ್ಷತೆಯಿಂದ ನೋಡಿಕೊಳ್ಳುತ್ತಿದ್ದನು. ನಂದರಲ್ಲಿ ಪ್ರೀತಿಯನ್ನೂ ವಿನಯವನ್ನೂ ತೋರಿಸುತ್ತ ಮಂತ್ರಿಮುಖ್ಯನಾಗಿದ್ದ ಅಮಾತ್ಯರಾಕ್ಷಸನಿಗೂ ಸಮ್ಮತನಾಗಿ ಪ್ರಜೆಗಳ ವಿಶ್ವಾಸಕ್ಕೆ ಪೂರ್ಣಪಾತ್ರನಾಗಿ ಇರುತ್ತಿದ್ದನು.

ಸರ್ವಾರ್ಥಸಿದ್ಧಿರಾಯನು ಪಟ್ಟಮಹಿಷಿಯಲ್ಲಿ ಜನಿಸಿದ ನವನಂದರು ಪ್ರವರ್ಧಮಾನರಾದುದನ್ನು ಕಂಡು ಅವರನ್ನು ಅಮಾತ್ಯರಾಕ್ಷಸನ ವಶಕ್ಕೆ ಒಪ್ಪಿಸಿದನು. ರಾಕ್ಷಸನು ಅವರಿಗೆ ರಾಜಯೋಗ್ಯವಾದ ಶಿಕ್ಷಣವನ್ನು ಕೊಡಿಸಿ ಸಕಲ ವಿದ್ಯಾಪಾರಂಗತರನ್ನಾಗಿ ಮಾಡಿದನು. ವಿವಾಹಕ್ಕೆ ತಕ್ಕ ವಯಸ್ಸು ಪ್ರಾಪ್ತವಾಗಲು ಅವರವರು ಒಪ್ಪಿದ ರಾಜಪುತ್ರಿಯರೊಡನೆ ರಾಜವೈಭವದಿಂದ ಮದುವೆ ಮಾಡಿಸಿದನು.

ಮೌರ್ಯನಿಗೆ ತನ್ನ ಬಹುಪತ್ನಿಯರಲ್ಲಿ ಚಂದ್ರಗುಪ್ತನೇ ಮೊದಲಾದ ನೂರು ಮಕ್ಕಳು ಜನಿಸಿದರು. ಕಾಲಕ್ರಮದಲ್ಲಿ ಅವರೂ ವಿದ್ಯಾಬುದ್ಧಿಗಳನ್ನು ಕಲಿತು ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಚಂದ್ರಗುಪ್ತನಾದರೆ ಎಲ್ಲದರಲ್ಲೂ ಒಂದು ಕೈ ಮೇಲೆನಿಸಿದ್ದನು. ಹುಣ್ಣಿಮೆಯ ದಿನ ಜನಿಸಿದ್ದರಿಂದ ಅವನಿಗೆ ಚಂದ್ರಗುಪ್ತನೆಂದು ನಾಮಕರಣಮಾಡಲಾಗಿತ್ತು. ಷೋಡಶಕಲಾಪೂರ್ಣನಾಗಿದ್ದ ಪೂರ್ಣಚಂದ್ರನ ಒಂದು ತೇಜಸ್ಸು ಚಂದ್ರಗುಪ್ತನಲ್ಲಿ ಸೇರಿದೆಯೋ ಎಂಬಂತೆ ಅವನು ಹೆಚ್ಚು ತೇಜಸ್ವಿಯಾಗಿ ತೋರುತ್ತಿದ್ದನು. ಉನ್ನತವಾದ

ಆಕಾರ, ಆಕಾರಕ್ಕೆ ಸದೃಶವಾದ ಪ್ರಜ್ಞೆ, ಅದಕ್ಕೆ ತಕ್ಕ ಶಾಸ್ತ್ರಜ್ಞಾನ--ಇವುಗಳಿಂದ ಕೂಡಿ ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದನು.

ನಂದರು ಸಕಲ ವಿದ್ಯಾನೈಪುಣ್ಯವನ್ನು ಪಡೆದು ವೃದ್ಧಿಗೊಂಡುದುದನ್ನು ನೋಡಿ ಸರ್ವಾರ್ಥಸಿದ್ಧಿಯು ಸಂತೋಷಗೊಂಡು ಸರ್ವರ ಸಮ್ಮತಿಯಂತೆ ಜ್ಯೇಷ್ಠ ನಂದನಿಗೆ ಯೌವರಾಜ್ಯಾಭಿಷೇಕ ಮಾಡಿಸಿದನು. ಅಣ್ಣತಮ್ಮಂದಿರು ಐಕ್ಯಮತ್ಯದಿಂದಿದ್ದು ಆಧಿಪತ್ಯವನ್ನು ನೋಡಿಕೊಳ್ಳುವಂತೆ ಹೇಳಿದನು. ಅವರಿಗೆ ಕಾಲಕಾಲಕ್ಕೆ ತಿಳಿವಳಿಕೆ ಕೊಟ್ಟು ಅವರನ್ನು ನೋಡಿಕೊಳ್ಳುವಂತೆ ಅಮಾತ್ಯ ರಾಕ್ಷಸನನ್ನು ನೇಮಿಸಿದನು. ತನಗೆ ಯೌವ್ವನವು ಕಳೆದು ವೃದ್ಧಾಪ್ಯವು ಪ್ರಾಪ್ತವಾಗುತ್ತಿರಲು ಪೂಜೆ, ಪುಣ್ಯಕಥಾಶ್ರವಣ, ದಾನಧರ್ಮ ಮೊದಲಾದುವುಗಳಲ್ಲಿ ಆಸಕ್ತನಾಗಿರುತ್ತಿದ್ದನು.

ನಂದರು ಅಮಾತ್ಯನಲ್ಲಿ ಪೂರ್ಣವಿಶ್ವಾಸವನ್ನಿಟ್ಟು ಅವನು ಹೇಳಿದಂತೆ ನಡೆದುಕೊಂಡು ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಮೌರ್ಯನೂ ನಂದರಲ್ಲಿ ಭ್ರಾತೃಭಾವದಿಂದಿರುತ್ತ, ಅವರು ಹೇಳಿದಂತೆ ನಡೆದುಕೊಂಡು ತನಗೆ ವಹಿಸಿದ ಕಾರ್ಯವನ್ನು ಸಮರ್ಪಕವಾಗಿ ಮಾಡುತ್ತ ಅವರಿಗೆ ಸಹಾಯಕನಾಗಿ ಇರುತ್ತಿದ್ದನು. ತನ್ನ ಮಕ್ಕಳು ವಿದ್ಯೆಯಲ್ಲಿ, ಶೌರ್ಯದಲ್ಲಿ, ನೀತಿಯಲ್ಲಿ, ಪ್ರಜೆಗಳ ಪ್ರೀತಿವಿಶ್ವಾಸಗಳನ್ನು ಗಳಿಸುವುದರಲ್ಲಿ ಮೇಲೆನಿಸಿ ಬೆಳೆಯುತ್ತಿದ್ದರು.

## ಮಾತ್ಸರ್ಯದ ಪರಿಣಾಮ

ದಿನವು ಕಳೆದಂತೆ ಮೌರ್ಯರ ವಿಷಯದಲ್ಲಿ ನಂದರಿಗೆ ಅಸೂಯೆ ಹೆಚ್ಚುತ್ತ ಬಂದಿತು. ಅವರು ತಮ್ಮ ಮನಸ್ಸಿನಲ್ಲಿ—ಈ ಮೌರ್ಯಪುತ್ರರು ನಮಗೆ ಜ್ಞಾತಿಗಳಾಗಿ ವಿದ್ಯೆಯಲ್ಲಿಯೂ ಪರಾಕ್ರಮದಲ್ಲಿಯೂ ನಮಗಿಂತ ಅಧಿಕರಾಗಿದ್ದಾರೆ. ಕೆಲವು ಕಾಲದ ಮೇಲೆ ಇವರು ಪ್ರಬಲರಾಗಿ ನಮ್ಮ ಪ್ರಭುತ್ವವನ್ನು ಆಕ್ರಮಿಸಿಕೊಳ್ಳಬಹುದೆಂದು ತೋರುತ್ತಿದೆ. ಆದುದರಿಂದ ಹೇಗಾದರೂ ಮಾಡಿ ಇವರನ್ನು ಈಗಲೆ ನಿಗ್ರಹಿಸಬೇಕು. ಇಲ್ಲದಿದ್ದರೆ ಇವರಿಂದ ನಮಗೆ ಅನರ್ಥ ಸಂಭವಿಸುವುದು ಖಂಡಿತ – ಎಂದು ಯೋಚಿಸಿದರು. ಬಳಿಕ ಅಮಾತ್ಯ

ರಾಕ್ಷಸನನ್ನು ಬರಮಾಡಿಕೊಂಡು ಏಕಾಂತದಲ್ಲಿ ಅವನೊಡನೆ ತಮ್ಮ ಮನೋಗತವನ್ನು ತಿಳಿಸಿದರು.

ಅದನ್ನು ಕೇಳಿ ರಾಕ್ಷಸನು—ರಾಜಪುತ್ರರಿರಾ, ನಿಷ್ಕಾರಣವಾಗಿ ಮತ್ಸರ ದಿಂದ ಸಾತ್ವಿಕರಾದ ಮೌರ್ಯರನ್ನು ಸಂಹರಿಸಿದರೆ ನಿಮಗೆ ಲೋಕದಲ್ಲಿ ಅಪಖ್ಯಾತಿಯುಂಟಾಗುವುದು ಮಾತ್ರವಲ್ಲದೆ ಪ್ರಜೆಗಳ ವಿಶ್ವಾಸವನ್ನೂ ಕಳೆದು ಕೊಳ್ಳುವಿರಿ. ನಿಮಗೆ ಮುಂದೆ ಅವರು ಶತ್ರುಗಳಾದಾರೆಂದು ನೀವು ಶಂಕಿಸುವು ದಾದರೆ 'ಕಳ್ಳಾ, ಕಳ್ಳಾ, ಹುಲೀ ಇರಿ' ಎಂಬ ಲೋಕದ ಗಾದೆಯಂತೆ ಶತ್ರುಗಳ ಮೇಲೆ ಒದಗಬಹುದಾದ ಯುದ್ಧಕ್ಕೆ ಮೌರ್ಯರನ್ನು ಉಬ್ಬಿಸಿ ಕಳುಹಿಸಿದರೆ, ಆ ಶತ್ರುಗಳಿಂದ ಅವರು ನಾಶವಾದರೆ ನಿಮಗೆ ಅಪವಾದವು ತಪ್ಪುವುದು. ಜೊತೆಗೆ ಶತ್ರುನಿಗ್ರಹವೂ ಆದಂತಾಗುವುದು–ಎಂದು ಸಮಾಧಾನ ಹೇಳಿದನು.

ಆ ಮಾತಿಗೆ ವಿನಂದನು–ಅಮಾತ್ಯರೆ, ಜ್ಞಾತಿಗಳಿಗೆ ಪರಸ್ಪರ ಮತ್ಸರವೂ ಅದಕ್ಕೆ ಪ್ರತೀಕಾರ ಮಾಡುವಿಕೆಯೂ ಲೋಕ ಪ್ರಸಿದ್ಧವು. ದೇಹದಲ್ಲಿ ಹುಟ್ಟಿದ ರೋಗವು ಅಪಥ್ಯದಿಂದ ವೃದ್ಧಿಹೊಂದಿ ಶರೀರವನ್ನು ನಾಶಮಾಡುವ ಹಾಗೆ ಒಂದೇ ಕುಲದಲ್ಲಿ ಹುಟ್ಟಿದರೂ ಮಾತ್ಸರ್ಯವುಂಟಾದಲ್ಲಿ ಮೌರ್ಯರು ನಮ್ಮನ್ನು ನಾಶಗೊಳಿಸದೆ ಬಿಡುವುದಿಲ್ಲ. ಕೊರಳಿಗೆ ಸುತ್ತಿದ ವಿಷಸರ್ಪವನ್ನು ತನ್ನ ಉದ್ಯಾನದ ಹಾವೆಂದು ಅದನ್ನು ಕೊಲ್ಲದೆ ಬಿಟ್ಟರೆ ನಮ್ಮ ಪ್ರಾಣಕ್ಕೇ ಅಪಾಯವಲ್ಲವೆ ? ಮೌರ್ಯರ ನಾಶದಿಂದ ಉಂಟಾಗಬಹುದಾದ ಅಪವಾದವನ್ನು ಧರ್ಮದಿಂದ ಪ್ರಜಾಪಾಲನೆ ಮಾಡುವುದರಿಂದ ಪರಿಹರಿಸಿಕೊಳ್ಳಬಹುದು— ಎಂದು ನುಡಿದನು.

ಆಗ ಜ್ಯೇಷ್ಠ ನಂದನು—ಅಮಾತ್ಯರೆ, ಶೂರರಾದ ಮೌರ್ಯರು ಶತ್ರುಗಳ ಮೇಲೆ ಯುದ್ಧಕ್ಕೆ ನಿಂತರೆ ಎಂಥ ದುರ್ಜಯರಾದ ಶತ್ರುಗಳಾದರೂ ಇವ ರಿಂದಲೇ ಕೊಲ್ಲಲ್ಪಡುವರು. ಆಗ ಮೌರ್ಯರಿಗೆ ಪ್ರಭುತ್ವವನ್ನು ಮತ್ತೊಬ್ಬರು ಕೊಡಬೇಕೆ ? ಯುದ್ಧದಲ್ಲಿ ಮಹಾಶೂರರೆಂದು ಪ್ರಸಿದ್ಧಿ ಪಡೆದಮೇಲೆ ಪ್ರಜೆ ಗಳು ಅವರನ್ನೇ ಅನುವರ್ತಿಸುವರು. ಅವರು ನಿಂತಲ್ಲಿಯೇ ಪಟ್ಟಣವಾಗುವುದು. ಕಡೆಗೆ ನಮ್ಮ ಶತ್ರುಗಳೆಲ್ಲಾ ಅವರಿಗೆ ಮಿತ್ರರಾಗುವರು. ಆಗ ನಮ್ಮನ್ನು ಕೇಳುವವರಾರು ?—ಎಂದು ತಿಳಿಸಿದನು. ನಂದರು ಈ ರೀತಿ ಒಬ್ಬೊಬ್ಬರು ಒಂದೊಂದು ರೀತಿ ತಮ್ಮ ಶಂಕೆಯನ್ನು ವ್ಯಕ್ತಪಡಿಸಿದರು.

ಅನಂತರ ರಾಕ್ಷಸನು—ರಾಜಕುಮಾರರೆ, ನಿಮ್ಮ ಯಶಸ್ಸನ್ನು ಚಿಂತಿಸುತ್ತಿರುವುದೇ ನನ್ನ ಕರ್ತವ್ಯ. ರಾಜೋತ್ತಮನಾದ ಸರ್ವಾರ್ಥಸಿದ್ಧಿಯ ಆಧಿಪತ್ಯದಲ್ಲಿ ವೃದ್ಧರ ಮುಂದೆ ಬಾಲಕರಿಗೆ ನೋವು ಇದುವರೆಗೂ ಉಂಟಾಗಿಲ್ಲ-ದುಃಖವನ್ನರಿಯದ ಮಹಾರಾಜರಿಗೆ ಪುತ್ರಶೋಕವು ಬಾರದಂತೆ ನೀವು ಆತನನ್ನು ಜೀವಾವಧಿ ಆದರಿಸಿದರೆ ನಿಮಗೆ ಇಹದಲ್ಲೂ ಪರದಲ್ಲೂ ಶ್ರೇಯಸ್ಸುಂಟಾಗುವುದು. ಇನ್ನು ಈ ದುರಾಲೋಚನೆಗೆ ಮನಸ್ಸು ಕೊಡಬೇಡಿ—ಎಂದು ಸಮಯೋಚಿತ ಬುದ್ಧಿವಾದ ಹೇಳಿದನು.

ಆಗ ವಿನಂದನು—ಮಂತ್ರಿಶ್ರೇಷ್ಠರೆ, ಮೌರ್ಯರ ನಿಗ್ರಹವು ನಿಮಗೆ ಸಮ್ಮತಿಸದಿದ್ದರೆ ಬಿಟ್ಟುಬಿಡಿ. ಈ ಅಭಿಪ್ರಾಯವು ಬಹಿರಂಗಪಡಿಸತಕ್ಕದ್ದಲ್ಲ. ಇದೇ ನಿಮ್ಮಿಂದ ನಮಗೆ ಆಗಬೇಕಾದ ಮಹೋಪಕಾರ. ಈ ವಿಷಯವನ್ನು ಇಲ್ಲಿಗೇ ಮರೆತುಬಿಡಿ—ಎಂದು ಹೇಳಿ ತನ್ನ ಸೋದರರನ್ನು ಕುರಿತು—ಈ ವಿಷಯವನ್ನು ಅಮಾತ್ಯರಲ್ಲಿ ಯೋಚಿಸಿದ್ದು ಯುಕ್ತವಾಗಿ ತೋರಲಿಲ್ಲ. ಇದು ನಮ್ಮಲ್ಲಿಯೇ ಇರಬೇಕಲ್ಲದೆ ವೃದ್ಧರಿಗೆ ತಿಳಿಸಿದರೆ ಅವರು ಸಮ್ಮತಿಸುವುದಿಲ್ಲ—ಎಂದು ಹೇಳಿದ ಮಾತಿಗೆ ನಂದರೆಲ್ಲಾ ಒಡಂಬಟ್ಟು ತಮ್ಮ ತಮ್ಮ ಅರಮನೆಗಳಿಗೆ ತೆರಳಿದರು.

ಅಮಾತ್ಯರಾಕ್ಷಸನು ತನ್ನ ಮನಸ್ಸಿನಲ್ಲಿ—ಈ ನಂದರು ನಿರಪರಾಧಿಗಳಾದ ಮೌರ್ಯರನ್ನು ಅಕಾರಣವಾಗಿ ಸ್ವಲ್ಪ ದಿನಗಳಲ್ಲೇ ಕೊಲ್ಲಿಸಬೇಕೆಂದಿದ್ದಾರೆ. ಈ ಸಮಯದಲ್ಲಿ ನಾನು ಇಲ್ಲಿಯೇ ಇದ್ದರೆ ನಂದರಿಗೆ ಬೇಕಾದವನಾಗಿರುವುದರಿಂದ ಈ ಮಹದಪವಾದಕ್ಕೆ ನಾನೂ ಭಾಗಿಯಾಗಬೇಕಾಗುವುದು. ಆದುದರಿಂದ ನಾನು ಕಾರಣಾಂತರಗಳನ್ನವಲಂಬಿಸಿ ಈ ಪಟ್ಟಣವನ್ನು ಬಿಟ್ಟು ಮತ್ತೆಲ್ಲಿಯಾದರೂ ಇರುವುದೇ ಕ್ಷೇಮ—ಎಂದು ನಿಶ್ಚಯ ಮಾಡಿಕೊಂಡು ತನ್ನ ಮನೆಗೆ ಹೋದನು.

ಮರುದಿವಸ ನಂದರು ತಮ್ಮಲ್ಲೇ ಆಲೋಚಿಸಿ, ದಾರುವರ್ಮನೆಂಬ ಶಿಲ್ಪಿಯನ್ನು ಕರೆಸಿ, ಪುರದ ಹೊರಗಣ ಉದ್ಯಾನದಲ್ಲಿ ವಿಸ್ತಾರವಾಗಿ ರಾಜಯೋಗ್ಯವಾದ ಒಂದು ಗೃಹವನ್ನು ನಿರ್ಮಿಸಿ, ಅದರ ಕೆಳಗೆ ನೆಲಮಾಳಿಗೆಯನ್ನು ಮಾಡಿ, ಮುಂಭಾಗದಲ್ಲಿ ಒಂದು ದಿವ್ಯ ಸರೋವರವನ್ನೂ ಅದರ ಸುತ್ತಲೂ ಪುಷ್ಪಭರಿತವಾದ ಲತಾವೃಕ್ಷಗಳನ್ನೂ ಕಲ್ಪಿಸಿ ಅಲ್ಲೇ ಕಾದಿರುವಂತೆ

ನೇಮಿಸಿ ಕಳುಹಿಸಿದರು. ಆ ಶಿಲ್ಪಿಯು ಅದೇ ಮೇರೆಗೆ ಸಕಲವನ್ನೂ ಮಾಡಿ ಕಾದುಕೊಂಡಿದ್ದನು.

ಕೆಲವು ದಿನಗಳು ಕಳೆದುವು. ಒಂದು ದಿನ ರಾಜಪುರಾಣಿಕನು ನಂದರ ಬಳಿಗೆ ಬಂದು ಕೈಮುಗಿದು–ರಾಜಪುತ್ರರೆ, ವೃದ್ಧಮಹಾರಾಜರ ಸನ್ನಿಧಿಯಲ್ಲಿ ಮಾಡುತ್ತಿದ್ದ ಮಹಾಭಾರತ ಪುರಾಣ ಶ್ರವಣವು ಇಂದಿಗೆ ಸಮಾಪ್ತವಾಗುತ್ತದೆ. ಮಂಗಳಾಚರಣದರ್ಶನಕ್ಕೆ ತಾವು ದಯಮಾಡಿಸಬೇಕು – ಎಂದು ಪ್ರಾರ್ಥಿಸಿ ಕೊಂಡನು.

ನಂದರು ತಮ್ಮಲ್ಲಿ—ತಂದೆಯು ಪುರದಲ್ಲೇ ಇರುವಾಗ ಮೌರ್ಯರನ್ನು ನಿಗ್ರಹಿಸಕೂಡದು. ತಂದೆಯನ್ನು ಉಪಾಯದಿಂದ ಪಟ್ಟಣದಿಂದ ದೂರಪಿರು ವಂತೆ ಮಾಡಲು ಇದೇ ಸಕಾಲ– ಎಂದುಬಗೆದು ಪುರಾಣಿಕನಿಗೆ ಮರುದಿನದಿಂದ ಪ್ರಯಾಗಕ್ಷೇತ್ರ ಮಹಿಮೆಯನ್ನು ಹೇಳುತ್ತ, ಪುಣ್ಯಕಾಲದಲ್ಲಿ ಅಲ್ಲಿ ಮಾಡುವ ಮಾಘಸ್ನಾನವು ಮಹಾಪುಣ್ಯದಾಯಕವೆಂಬುದನ್ನು ತಿಳಿಸುವಂತೆ ಹೇಳಿ ಕೈ ತುಂಬ ದಕ್ಷಿಣೆಯನ್ನು ಕೊಟ್ಟು ಕಳುಹಿಸಿದರು. ಆ ಪುರಾಣಿಕನು ಅದರಂತೆ ಕಾಶೀಕಾಂಡ ಪುರಾಣಶ್ರವಣವನ್ನು ಮಾಡಿಸುತ್ತ, 'ಪ್ರಯಾಗದ ಮಾಘಮಾಸದ ಸ್ನಾನವು ಮಹಾಪುಣ್ಯಫಲಪ್ರದವೆಂದು ತಿಳಿಸುತ್ತಿರಲು, ಮಾಘಸ್ನಾನಾರ್ಥ ವಾಗಿ ಪ್ರಯಾಗಕ್ಕೆ ಪ್ರಯಾಣಮಾಡಬೇಕೆಂದು ದೊರೆಯು ನಿಶ್ಚಯಿಸಿ ಕೊಂಡನು.

ನಂದರು ಮೌರ್ಯಪುತ್ರರಲ್ಲಿ ತಮಗಿದ್ದ ಮತ್ಸರವನ್ನು ಪ್ರಕಟಮಾಡದೆ, ಅವರ ಆಯುಧವಿದ್ಯಾಕೌಶಲ್ಯವನ್ನು ನೋಡಿ ಸಂತೋಷಪಟ್ಟವರಂತೆ ತೋರ್ಪ ಡಿಸಿಕೊಳ್ಳುತ್ತ, ತಮ್ಮಲ್ಲಿ ಅವರಿಗೆ ವಿಶ್ವಾಸವು ಹೆಚ್ಚಲೆಂದು ಅವರನ್ನು ವಸ್ತ್ರ ಭೂಷಣವಾಹನಾದಿಗಳಿಂದ ಸನ್ಮಾನಿಸುತ್ತ ಅವರನ್ನು ನಿಗ್ರಹಿಸಲು ಸಮಯ ವನ್ನು ನಿರೀಕ್ಷಿಸುತ್ತಿದ್ದರು.

ಸರ್ವಾರ್ಥಸಿದ್ಧಿರಾಜನು ಪತ್ನಿಯರೊಡನೆ ಪ್ರಯಾಗಕ್ಕೆ ಹೊರಡುವುದು ನಿಶ್ಚಯವಾಯಿತು. ನಂದರು ಸಂತೋಷಪಟ್ಟು ಅಲ್ಲಿಗೆ ಬೇಕಾಗುವ ಸಲಕರಣೆ ಗಳನ್ನು ಸಿದ್ಧಗೊಳಿಸಿದರು. ವೃದ್ಧ ಮಾತಾಪಿತೃಗಳು ಪ್ರಯಾಣ ಮಾಡುವುದ ರಿಂದ ಅಮಾತ್ಯರಾಕ್ಷಸನೇ ಅವರ ಸಂಗಡ ಹೋಗಿಬರುವಂತೆ ರಾಕ್ಷಸನನ್ನು ಹೊರಡಿಸಿದರು. ಪುರವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗಬೇಕೆಂದು

ಮೊದಲೇ ಯೋಚಿಸುತ್ತಿದ್ದ ಅಮಾತ್ಯನಿಗೆ ಅವಕಾಶ ಸಿಕ್ಕಿದಂತಾಯಿತು. ರಾಜನ ಸಂಗಡ ಪ್ರಯಾಗಕ್ಕೆ ಪ್ರಯಾಣ ಮಾಡಿದನು.

ಬಳಿಕ ನಂದರು ಇನ್ನು ಕಾಲವಿಳಂಬ ಮಾಡಬಾರದೆಂದು ಯೋಚಿಸಿ ಮಾರನೆಯ ದಿನ ಮೃಗಗಳ ಬೇಟೆಗೆ ಪ್ರಯಾಣವೆಂದು ವರ್ತಮಾನವನ್ನು ಪ್ರಕಟಿಸಿದರು. ಅವರ ಆಜ್ಞೆಯಂತೆ ಬೇಟೆಗಾರರು ಬಲೆ ಮೊದಲಾದ ಸಲಕರಣೆಗಳೊಡನೆ ಮೊದಲೇ ಪ್ರಯಾಣಮಾಡಿದರು. ತಾವು ಬೇಟೆಯಿಂದ ಹಿಂದಿರುಗುವ ವೇಳೆಗೆ ಪುರೋದ್ಯಾನದಲ್ಲಿ ಪಾಕವನ್ನು ಸಿದ್ಧಮಾಡಿಕೊಂಡಿರುವಂತೆ ಬಾಣಸಿಗರಿಗೆ ನೇಮಿಸಿದರು. ಉತ್ತಮಾಶ್ವಗಳನ್ನು ತಂದು ನಿಲ್ಲಿಸುವಂತೆ ದೂತರಿಗೆ ಆಜ್ಞೆಮಾಡಿದರು.

ಮೌರ್ಯನನ್ನೂ ಅವನ ಮಕ್ಕಳನ್ನೂ ಬರಮಾಡಿಕೊಂಡು—ನಿಮಗೆ ಮೃಗಯಾ ವಿಹಾರದಲ್ಲಿ ಹೆಚ್ಚಾದ ಅಭಿಲಾಷೆಯಿರುವುದು ಸರಿಯಷ್ಟೆ. ಈ ದಿವಸ ನಾವೆಲ್ಲರೂ ಮೃಗಗಳನ್ನು ಬೇಟೆಯಾಡಿ ಬಂದು ಪುರದ ಹೊರಗಣ ಉದ್ಯಾನದಲ್ಲಿ ಆನಂದದಿಂದ ಭೋಜನಮಾಡಿ ವಿನೋದಗೋಷ್ಠಿಯಲ್ಲಿದ್ದು ನಾಳೆ ಪಟ್ಟಣಕ್ಕೆ ಹಿಂದಿರುಗಬೇಕೆಂದು ನಿಶ್ಚಯಿಸಿದ್ದೇವೆ. ನೀವೆಲ್ಲರೂ ಈ ಮೃಗಯಾ ವಿಹಾರಕ್ಕೆ ಈಗಲೇ ಹೊರಡಿರಿ. ಸಕಲವೂ ಸಿದ್ಧವಾಗಿವೆ—ಎಂದು ಹೇಳಿದರು. ನಂದರ ಹೃದಯದ ಕಪಟವನ್ನರಿಯದೆ ಅವರ ಸವಿಮಾತಿಗೆ ಮರುಳಾಗಿ ಸಂತೋಷದಿಂದ ಅವರ ಮಾತಿಗೆ ಒಡಂಬಟ್ಟು ಮೌರ್ಯನೂ ಅವನ ನೂರು ಮಂದಿ ಮಕ್ಕಳೂ ಬೇಟೆಯ ಉಡುಪು ಧರಿಸಿ ತಮ್ಮ ತಮ್ಮ ಕುದುರೆಗಳನ್ನು ಹತ್ತಿಕೊಂಡು ನಂದರೊಡನೆ ಅರಣ್ಯಾಭಿಮುಖರಾಗಿ ತೆರಳಿದರು.

ಅನಂತರ ಎಲ್ಲರೂ ಬೇಟೆಯಾಡಿ ಶಾಂತಚಿತ್ತರಾಗಿ ಅಲ್ಲಿಂದ ಪುರೋದ್ಯಾನಕ್ಕೆ ಬಂದರು. ತಂಪಾಗಿಯೂ ರಮಣೀಯವಾಗಿಯೂ ಇದ್ದ ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡು, ವಿನೋದದಿಂದ ನೀರಾಟವಾಡಿ, ವಸ್ತ್ರಾಭರಣಗಂಧಮಾಲ್ಯಾದಿಗಳಿಂದ ಅಲಂಕೃತರಾಗಿ ನಂದರೂ ಮೌರ್ಯರೂ ಭೋಜನಶಾಲೆಗೆ ಹೋದರು. ಆಗ ನಂದರು ತಮ್ಮ ಬಂಧುಮಿತ್ರ ಜನರನ್ನು ಮೊದಲೇ ಮೇಲ್ಗಡೆ ಏರ್ಪಡಿಸಿದ್ದ ಭೋಜನ ಪಂಕ್ತಿಗಳಲ್ಲಿ ಕುಳ್ಳಿರಿಸಿದರು. ತಮ್ಮ ಮನೆಯ ಜನಕ್ಕೆಂದು ಕೆಳಗಿನ ಅಂತರ್ಗೃಹದಲ್ಲಿ ಎಡೆಗಳನ್ನು ಹಾಕಿಸಿ ಮೌರ್ಯನನ್ನೂ ಅವನ ನೂರು ಮಂದಿ ಮಕ್ಕಳನ್ನೂ ಅಲ್ಲಿ ಕುಳಿತುಕೊಳ್ಳುವಂತೆ

ಹೇಳಿ ತಾವೂ ಅಲ್ಲೇ ಕುಳಿತುಕೊಳ್ಳುವಂತೆ ನಟಿಸಿ, ಮೇಲಕ್ಕೆ ಹೋಗುತ್ತಾ ಬರುತ್ತಾ ಇದ್ದು, ಪದಾರ್ಥಗಳನ್ನೆಲ್ಲಾ ಬಡಿಸಿದ ಮೇಲೆ ಭೋಜನವಾಗಲೆಂದು ಹೇಳಿ ಮೇಲುಪಂಕ್ತಿಯ ವಿಚಾರಣೆಯನ್ನು ಮಾಡುವವರಂತೆ ಹೊರಗೆ ಬಂದು ಮೌರ್ಯರು ಕುಳಿತಿದ್ದ ನೆಲಮಾಳಿಗೆಯ ಬಾಗಿಲನ್ನು ಶೀಘ್ರವಾಗಿ ಮುಚ್ಚಿಸಿದರು. ಆ ದ್ವಾರವನ್ನು ಭದ್ರಪಡಿಸಿ ಜನಾಪವಾದಕ್ಕೆ ಭೀತರಾಗದೆ, ಪರಲೋಕಭೀತಿಯನ್ನೂ ಲೆಕ್ಕಿಸದೆ ಖಡ್ಗಪಾಣಿಗಳಾದ ತಮ್ಮ ದೂತರನ್ನು ಆ ಬಾಗಿಲಲ್ಲಿ ಕಾವಲಿಟ್ಟರು. ಅವರಿಗೆ—ನೀವು ಅನ್ನೋದಕಗಳನ್ನು ತಂದು ಕೊಡುತ್ತಿರುವುದರಿಂದ ಕಾರಾಗೃಹದಲ್ಲಿರುವ ಮೌರ್ಯರು ಜೀವಂತರಾಗಿದ್ದಾರೆಂದು ಜನರಿಗೆ ತೋರ್ಪಡಿಸುತ್ತ, ಇವರೆಲ್ಲರೂ ಒಳಗೆ ಮೃತರಾದ ಸಮಾಚಾರವನ್ನು ನಮಗೆ ರಹಸ್ಯವಾಗಿ ತಿಳಿಸಬೇಕು--ಎಂದು ಆಜ್ಞೆಮಾಡಿದರು. ಈ ಮೂಲಕ ತಮ್ಮ ಶತ್ರುಗಳು ನಾಶವಾದರೆಂದು ಭಾವಿಸಿಕೊಂಡು ತಮ್ಮ ತಮ್ಮ ವಾಹನಗಳನ್ನು ಹತ್ತಿ ಪಟ್ಟಣವನ್ನು ಸೇರಿದರು.

ನೆಲಮಾಳಿಗೆಯನ್ನು ಕಾಯುತ್ತಿದ್ದ ದೂತರು ಮೌರ್ಯರಿಗೆ ಅನ್ನೋದಕಗಳನ್ನು ಕೊಟ್ಟೂಕೊಡದಂತೆ ಮಾಡುತ್ತ ಬಂದುದರಿಂದ ಅವರು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಕ್ಷೀಣಿಸುತ್ತ ದಿನದಿನಕ್ಕೆ ಎಂಟು ಹತ್ತು ಜನರ ಮೇರೆಗೆ ಮೃತರಾಗುತ್ತಿದ್ದರು. ಗವಾಕ್ಷದಿಂದ ನೋಡಿದ ರಾಜದೂತರು ಮೌರ್ಯರೆಲ್ಲರೂ ಸತ್ತುಹೋದರೆಂದು ಮಾತನಾಡಿಕೊಳ್ಳುತ್ತಿದ್ದರು. ಒಳಗೆ ಜೀವಂತನಾಗಿದ್ದ ಚಂದ್ರಗುಪ್ತನು ಆ ದೂತರ ಮಾತನ್ನು ಕೇಳಿಸಿಕೊಂಡು ಅವರಿಗೆ—ಬಂಧಿತರಾದ ಜನರಲ್ಲಿ ನಾನು ಒಬ್ಬನು ಹೊರತು ಮಿಕ್ಕವರೆಲ್ಲರೂ ಇಹಲೋಕದ ವ್ಯಾಪಾರವನ್ನು ತ್ಯಜಿಸಿದರು. ನನಗೂ ಇನ್ನು ಒಂದೆರಡು ದಿನಗಳಲ್ಲಿ ಸಾವು ಸಮನಿಸುವಂತೆ ತೋರುತ್ತಿದೆ. ನನ್ನೊಬ್ಬನನ್ನಾದರೂ ಈ ಶವಗಂಧ ಭೂಯಿಷ್ಠವಾದ ಸ್ಥಳದಿಂದ ತೆಗೆದು ಮತ್ತೊಂದು ಕಾರಾಗೃಹದಲ್ಲಿ ಇಟ್ಟರೆ ನೆಮ್ಮದಿಯಿಂದ ಪ್ರಾಣಬಿಡುವೆನು. ನಿಮಗೆ ಕರುಣೆಯಿದ್ದರೆ ಈ ಸಂಗತಿಯನ್ನು ನಂದರಿಗೆ ಅರಿಕೆಮಾಡಿ--ಎಂದು ಕೇಳಿಕೊಂಡನು.

ದೂತರು ಆ ಸಂಗತಿಯನ್ನು ನಂದರಿಗೆ ರಹಸ್ಯವಾಗಿ ಬಿನ್ನೈಸಿದರು. ನಂದರು ಮನಸ್ಸಿನಲ್ಲಿ ಅತ್ಯಾನಂದ ಹೊಂದಿದವರಾಗಿ 'ಇನ್ನು ಮುಂದೆ ಹೆಣದ ವಾಸನೆಯು ಈಚೆಗೆ ಬಂದರೆ ಜನರಲ್ಲಿ ಹಾಹಾಕಾರವುಂಟಾಗಬಹುದು;

ಚಂದ್ರಗುಪ್ತನೆಂಬುವನು ಒಬ್ಬನೇ ಬದುಕಿದ್ದರೂ ಅವನೂ ಒಂದೆರಡು ದಿನಗಳಲ್ಲಿ ಮೃತನಾಗುವನು' ಎಂದು ಭಾವಿಸಿ ದೂತರಿಗೆ--ಚಂದ್ರಗುಪ್ತನು ಒಂದೆರಡು ದಿನಗಳಲ್ಲಿ ಸಾಯುವಂತಾಗಿದ್ದರೆ ಅವನನ್ನು ಈಚೆಗೆ ತೆಗೆದು ಮತ್ತೊಂದು ಸೆರೆಮನೆಯಲ್ಲಿಟ್ಟು ನೆಲಮಾಳಿಗೆಗೆ ಅಗ್ನಿಪ್ರವೇಶಮಾಡಿಸಿಬಿಡಿ. ಚಂದ್ರಗುಪ್ತನು ಸತ್ತ ಸಂಗತಿಯನ್ನು ಬಂದು ತಿಳಿಸಿ-ಎಂದು ಹೇಳಿ ಕಳುಹಿಸಿದರು. ದೂತರು ಅದರಂತೆ ಚಂದ್ರಗುಪ್ತನನ್ನು ಬೇರೊಂದು ಕಾರಾಗೃಹಕ್ಕೆ ಸಾಗಿಸಿ ಮೊದಲಿನ ಸೆರೆಮನೆಗೆ ಬೆಂಕಿ ಇಟ್ಟರು. ಬಳಿಕ ನಂದರು ತಮ್ಮ ಕಪಟವು ಗೊತ್ತಾಗದಿರಲೆಂದು ಪ್ರಯಾಗದಲ್ಲಿದ್ದ ವೃದ್ಧಮಹಾರಾಜರಿಗೆ ಪತ್ರವನ್ನು ಬರೆದು ಕಳುಹಿಸಿದರು.

'ಶ್ರೀಮತ್ ಅಪ್ಪಾಜಿಯವರ ಪಾದಪದ್ಮಗಳಿಗೆ ನಂದರು ಮಾಡುವ ಬಿನ್ನಹ. ನೀವು ಇಲ್ಲಿಂದ ಹೋದ ಬಳಿಕ ಇಲ್ಲಿ ನಡೆದ ಅನರ್ಥವನ್ನು ಹೇಳುವುದಕ್ಕೆ ಶಕ್ಯವಿಲ್ಲ. ಒಂದು ದಿನ ಮೌರ್ಯರು ಬೇಟೆಗೆ ಹೋಗಬೇಕೆಂದು ನಮ್ಮನ್ನು ನಿರ್ಬಂಧಿಸಿದರು. ಅವರ ಮಾತಿಗೆ ಒಪ್ಪಿ ಎಲ್ಲರೂ ಬೇಟೆಯಾಡಿ ಪುರದ ಉದ್ಯಾನದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದೆವು. ಮೌರ್ಯಪುತ್ರರು ಹಸಿವನ್ನು ಸಹಿಸಲಾರದೆ ನಾವು ಪಂಕ್ತಿಗೆ ಬರುವುದಕ್ಕೆ ಮುಂಚಿತವಾಗಿಯೇ ಉದ್ಯಾನಗೃಹದಲ್ಲಿ ಏರ್ಪಡಿಸಿ ಮಾಡಿಸಿದ್ದ ಭಕ್ಷ್ಯಗಳನ್ನು ಭಕ್ಷಿಸಿ, ಕಾಪಿಶಾಯಿನವೆಂಬ ಮದ್ಯವನ್ನು ತರಿಸಿ ಅಮಿತವಾಗಿ ಪಾನಮಾಡಿದರು. ಅದರಿಂದ ದೇಹಸ್ಮೃತಿ ತಪ್ಪಿದವರಾಗಿ ಅಲ್ಲಿದ್ದ ಬಾಣಸಿಗರನ್ನು ಹೊಡೆದು ಒಬ್ಬರಿಗೊಬ್ಬರು ಬಡಿದಾಡಿದರು. ಅಲ್ಲಿ ಜೀರ್ಣವಾದ ಕಂಬಗಳ ಆಶ್ರಯಕ್ಕೆಂದು ಕೊಟ್ಟಿದ್ದ ಸನ್ನೇಮರಗಳನ್ನು ಹಿಡಿದೆಳೆದು ಕೋಲಾಹಲ ಮಾಡಿದರು. ಮಕ್ಕಳ ಕೋಲಾಹಲವೇನೆಂದು ತಿಳಿಯಲು ಮೌರ್ಯನೂ ಒಳಗೆ ಹೋದನು. ಸನ್ನೇಮರಗಳು ಸಡಿಲಿದ್ದರಿಂದ ಕಟ್ಟಿದ್ದ ಹಗ್ಗ ಕಿತ್ತುಹೋಗಿ ಮೇಲಿನ ಅಂತಸ್ತು ಮುರಿದು ಅವರ ಮೇಲೆ ಬಿದ್ದಿತು. ಆದರಿಂದ ಮೌರ್ಯನೂ ಅವನ ಮಕ್ಕಳಲ್ಲಿ ಚಂದ್ರಗುಪ್ತನೊಬ್ಬನು ಹೊರತು ಉಳಿದವರೆಲ್ಲರೂ ಸತ್ತುಹೋದರು. ಚಂದ್ರಗುಪ್ತನಿಗೂ ಬಹಳ ಪೆಟ್ಟು ತಗುಲಿರುವುದರಿಂದ ಆತನೂ ಜೀವಿಸಲಾರನು. ನಾವು ಪುಷ್ಪವಾಟಿಕೆಯನ್ನು ನೋಡುತ್ತ ಹೊರಗಡೆ ಇದ್ದುದರಿಂದ ಬದುಕಿಕೊಂಡೆವು. ಯಾವಾಗಲೂ ಸಂಗಡಲೇ ಇರುತ್ತಿದ್ದ ಮೌರ್ಯಪುತ್ರರನ್ನು ಬೇರ್ಪಡಿಸಿ,

ಸಂಹರಿಸಿ, ನಮ್ಮನ್ನು ಮಾತ್ರ ಉಳಿಸಿರುವ ದೈವಸಂಕಲ್ಪಕ್ಕೆ ಎಷ್ಟು ಆಶ್ಚರ್ಯಪಡ ಬೇಕು! ಈಗ ಇಲ್ಲಿ ನಡೆದ ಈ ಅಪಾಯದಿಂದ ನಾವೆಲ್ಲ ಬಹಳ ನೋವಿಗೆ ಗುರಿಯಾಗಿದ್ದೇವೆ. ಅಪ್ಪಣೆಯಾದರೆ ನಾವೂ ಅಲ್ಲಿಗೆ ಬಂದುಬಿಡುತ್ತೇವೆ. ಇತಿ ವಂದನೆಗಳು.'

ಹೀಗೆಂದು ಬರೆದ ಪತ್ರದ ಒಕ್ಕಣೆಯನ್ನು ಓದಿಕೊಂಡು ರಾಕ್ಷಸನು— ಅಕಟ! ನಂದರು ನಿಷ್ಕಾರಣವಾಗಿ ಮೌರ್ಯರನ್ನು ಕಪಟದಿಂದ ಸಂಹರಿಸಿ ಲೋಕಾಪವಾದಕ್ಕೆ ಗುರಿಯಾದರು, ಇನ್ನು ಮೇಲೆ ಅವರಿಗೆ ದೈವಬಲ ತಪ್ಪುವುದು ಖಂಡಿತ—ಎಂದು ಮನಸ್ಸಿನಲ್ಲಿ ಚಿಂತಿಸಿ ವೃದ್ಧಮಹಾರಾಜನಿಗೆ ಮೌರ್ಯರ ಮರಣವೃತ್ತಾಂತವನ್ನು ತಿಳಿಸಿದನು.

ಆ ಮಾತು ಕಿವಿಗೆ ಬೀಳುತ್ತಲೇ ರಾಜನು ಶೋಕಭಾರದಿಂದ ಮೂರ್ಛೆ ಹೊಂದಿದನು. ಆ ವೇಳೆಗಾಗಲೇ ಅವನಿಗೆ ಮುರಾದೇವಿಯ ವಿಯೋಗದುಃಖ ಬೇರೆ ಸಂಭವಿಸಿತ್ತು. ಮುರಾದೇವಿಯ ಪೂಜಾಭಕ್ತಿಗಳಿಗೆ ಸುಪ್ರೀತಳಾದ ಭಾಗೀರಥಿಯು ಆಕೆಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತನ್ನ ಬಳಿಗೆ ಬರುವಂತೆ ಕರೆಯಿತ್ತಳು. ಒಂದು ದಿನ ಆಕೆಯು ತ್ರಿವೇಣಿಯಲ್ಲಿ ಸ್ನಾನಮಾಡಿ, ಭಾಗೀರಥಿಯನ್ನು ಪೂಜಿಸಿ ತನ್ನನ್ನು ಕೃತಾರ್ಥಳನ್ನಾಗಿ ಮಾಡುವಂತೆ ಪ್ರಾರ್ಥಿಸಿಕೊಂಡಳು. ಆಗ ಪ್ರಸನ್ನಳಾದ ಗಂಗಾದೇವಿಯು ಎಲ್ಲರೂ ನೋಡು ತ್ತಿದ್ದಂತೆ ತನ್ನ ದಿವ್ಯಹಸ್ತದಿಂದ ಆ ಮುರಾದೇವಿಯ ಕೈಗಳನ್ನು ಹಿಡಿದು ಕೊಂಡು ಆ ನದಿಯಲ್ಲಿ ಐಕ್ಯವಾದಳು. ಸರ್ವಾರ್ಥಸಿದ್ಧಿರಾಯನಿಗೆ ಪ್ರಿಯ ಪತ್ನೀವಿಯೋಗ ದುಃಖ ಇನ್ನೂ ಆರಿರಲಿಲ್ಲ. ಅಷ್ಟರಲ್ಲೇ ಮತ್ತೊಂದು ದುರಂತ ವಾರ್ತೆ. ಸುನಂದಾದೇವಿಯ ಶೈತ್ಯೋಪಚಾರದಿಂದ ಚೇತನಗೊಂಡ ದೊರೆಯು ಪುತ್ರ-ಪೌತ್ರರ ಮರಣಕ್ಕಾಗಿ ಬಹಳ ಪ್ರಲಾಪಿಸಿದನು. ಅಮಾತ್ಯನು ಬಗೆಬಗೆಯಲ್ಲಿ ಸಂತೈಸಿ ಅವರನ್ನು ಕರೆದುಕೊಂಡು ಕುಸುಮಪುರಕ್ಕೆ ಹಿಂದಿರು ಗಿದನು. ಕ್ರಮೇಣ ನಂದರ ಕಪಟವು ರಾಜನಿಗೆ ಗೊತ್ತಾಗಿ ಅದರಿಂದ ಅವನು ಮತ್ತಷ್ಟು ಚಿಂತೆಗೊಳಗಾದನು.

ರಾಕ್ಷಸನು ತನ್ನ ಮನಸ್ಸಿನಲ್ಲಿ—ಈಗ ಈ ನಂದರ ದುರ್ಗುಣವನ್ನು ಮನಸ್ಸಿನಲ್ಲಿಟ್ಟುಕೊಂಡು ಇವರಲ್ಲಿ ಉದಾಸೀನತೆಯನ್ನು ತೋರಿಸಿದರೆ ಮಹಾ ಅನರ್ಥವೇ ಉಂಟಾಗಿ ನಮ್ಮ ಯಶಸ್ಸಿಗೂ ವಂಶಕ್ಕೂ ಹಾನಿ ಸಂಭವಿಸುವುದು.

ಶತ್ರುಗಳಿಗೆ ನಾವಾಗಿ ದಾರಿತೋರಿಸಿದಂತಾಗುವುದು. ಆದುದರಿಂದ ಎಚ್ಚರಿಕೆ ಯಿಂದ ಮೊದಲಿನಂತೆಯೇ ಇರುವುದೇ ಲೇಸು—ಎಂದು ಭಾವಿಸಿ ಎಂದಿನಂತೆ ರಾಜಕಾರ್ಯದಲ್ಲಿ ನಿರತನಾಗಿದ್ದನು. ನಂದರು ತಮ್ಮ ಕಪಟವು ಅಮಾತ್ಯನಿಗೆ ಗೊತ್ತಿದ್ದರೂ ತಮ್ಮ ವಿಷಯದಲ್ಲಿ ಕ್ರೋಧವೆಣಿಸದೆ ಮೊದಲಿನಂತೆ ಆಸಕ್ತ ನಾಗಿದ್ದಾನೆಂದು ರಾಕ್ಷಸನನ್ನು ಮೊದಲಿಗಿಂತ ಹೆಚ್ಚಾಗಿ ಗೌರವಿಸುತ್ತ ಸಂತೋಷದಿಂದ್ದರು.

## ಬಂಧವಿಮೋಚನೆ

ಮೌರ್ಯರ ದುರಂತದ ಸಂಗತಿ ದೇಶ ವಿದೇಶಗಳಲ್ಲೆಲ್ಲಾ ಹರಡಿತು. ಪರ್ವತ ರಾಜನ ಗೂಢಚಾರರು ಪಾಟಲೀಪುರದಿಂದ ತ್ವರಿತವಾಗಿ ಬಂದು ಪರ್ವತ ರಾಜನಿಗೆ ಮೌರ್ಯರ ದುರಂತದ ವಿಚಾರವನ್ನು ಸಾಂಗವಾಗಿ ತಿಳಿಸಿದರು.

ಪರ್ವತರಾಜನು ಶಬರವರ್ಮನೆಂಬ ತನ್ನ ಆಪ್ತಮಂತ್ರಿಯೊಡನೆ ಆ ವಿಚಾರವನ್ನು ಪರ್ಯಾಲೋಚಿಸಿದನು.

“ನಂದರು ಬುದ್ಧಿಹೀನರಾಗಿ ತಮಗೆ ಬೆಂಬಲಿಗರಾಗಿದ್ದ ಶೂರರಾದ ಮೌರ್ಯರನ್ನು ಕಪಟದಿಂದ ಕೊಲ್ಲಿಸಿ ತಮಗೆ ತಾವೇ ಅನರ್ಥವನ್ನು ತಂದು ಕೊಂಡರು. ರಣಾಂಗಣಕ್ಕೆ ಹೊರಟಿರುವ ಯೋಧನು ತನ್ನ ಕೈಕತ್ತಿಯನ್ನು ತಾನೇ ಮುರಿದು ಬಿಸುಟಂತಾಯಿತು. ಸ್ವಜನರನ್ನೇ ಸಂಹರಿಸಿದುದರಿಂದ ಪ್ರಜೆ ಗಳಿಗೆ ಅವರ ವಿಷಯದಲ್ಲಿ ಗೌರವ ಬುದ್ಧಿಯು ಕಡಿಮೆಯಾಗದಿರದು. ಅಮಾತ್ಯ ರಾಕ್ಷಸನು ಇಂಥ ದುಷ್ಕೃತ್ಯಕ್ಕೆ ಸಮ್ಮತಿಸಿರಲಾರನು. ದೈವವಶದಿಂದ ಚಂದ್ರ ಗುಪ್ತನು ಉಳಿದಿರುವುದರಿಂದ ನಂದರಿಗೆ ಶತ್ರುಶೇಷ ಉಳಿದಂತಾಯಿತು. ಅವನಿಂದಲೇ ಅವರ ನಾಶವು ಆದರೂ ಆಗಬಹುದು.”

ಎಂದು ಹೇಳಿದ ದೊರೆಯ ಮಾತಿಗೆ ಶಬರವರ್ಮನು—ಜೀಯಾ, ನೀವು ಹೇಳಿದುದೆಲ್ಲವೂ ಸತ್ಯವೇ ಸರಿ. ಮೌರ್ಯವಧೆಯು ರಾಕ್ಷಸನಿಗೆ ಸಮ್ಮತವಾಗ ದಿದ್ದರೆ ಅವನಿಗೂ ನಂದರಿಗೂ ಸಮಾನಾಭಿಪ್ರಾಯ ಇರುವಂತೆ ಕಾಣುವುದಿಲ್ಲ. ಸೇನಾಪತಿಗಳಿಗೂ ಅದು ಯೋಗ್ಯವಾಗಿ ಕಂಡಿರಲಾರದು. ದೈವಯೋಗದಿಂದ ಚಂದ್ರಗುಪ್ತನು ಬಿಡುಗಡೆ ಹೊಂದಿ ಹೊರಗೆ ಬಂದರೆ ಆತನಿಗೆ ಇವರೆಲ್ಲರೂ ಸಹಾಯಕರಾಗಬಹುದು. ಆ ವಿಚಾರ ಹೇಗಾದರೂ ಇರಲಿ. ಈಗ ನಂದರು

ಮತ್ತರಾಗಿ ಶತ್ರುರಾಜ್ಯಗಳನ್ನು ಒತ್ತರಿಸಿಕೊಂಡು ಪ್ರಬಲರಾಗುತ್ತಿದ್ದಾರೆ. ಮೊದಲಿನಿಂದಲೂ ನಮಗೂ ಪಾಟಲೀಪುರದವರಿಗೂ ಅಷ್ಟಾಗಿ ವಿಹಿತವಿಲ್ಲ. ಮೌರ್ಯನಿರುವವರೆಗೂ ನಂದರು ಅಜೇಯರೆನಿಸಿದ್ದರು. ಈಗ ಅವರ ಬಲಾಬಲಗಳನ್ನೂ ಅಮಾತ್ಯ ವರ್ಗದವರ ಬುದ್ಧಿಶಕ್ತಿಯನ್ನೂ ಅರಿತು ನಾವು ನಮ್ಮ ರಾಜ್ಯವನ್ನು ಬಲಪಡಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ಒಂದು ಕಪಟಶಿಲ್ಪದ ಮೂಲಕ ಅವರ ಬುದ್ಧಿ ಪರೀಕ್ಷೆ ಮಾಡಬೇಕೆಂದಿರುವೆನು--ಎಂದು ವಿಜ್ಞಾಪಿಸಿದನು. ಪವರ್ತರಾಜನು ಅದಕ್ಕೆ ಸಮ್ಮತಿಸಿದನು.

ಬಳಿಕ ಶಬರವರ್ಮನು ಚತುರರಾದ ಶಿಲ್ಪಿಗಳನ್ನು ಕರೆಸಿ ಅವರಿಂದ ಅಖಂಡವಾದ ಒಂದು ಪಂಜರವನ್ನೂ ಅದರಲ್ಲಿ ಒಂದು ಕಪಟ ಸಿಂಹವನ್ನೂ ಮಾಡಿಸಿದನು. ಅದಕ್ಕೆ ಬುದ್ಧಿವಂತರಾದ ರಕ್ಷಕರನ್ನು ಗೊತ್ತುಮಾಡಿ ಅವರಿಗೆ ಅದರ ರಹಸ್ಯವನ್ನು ತಿಳಿಸಿ, ಅವರಿಗೆ ಹೇಳಬೇಕಾದ ಕೆಲವು ಮಾತುಗಳನ್ನು ಹೇಳಿದನು. 'ಈ ಪಂಜರವನ್ನು ಪಾಟಲೀಪುರಕ್ಕೆ ಒಯ್ದು, ಮುಖ್ಯವಾದ ಸ್ಥಳಗಳಲ್ಲಿ ಇರಿಸಿ ನಾನು ಹೇಳಿದ ರೀತಿಯಲ್ಲಿ ಸಾರುತ್ತಾ ಇದ್ದು, ಇದರ ಪರೀಕ್ಷೆಯನ್ನು ಯಾರು ಮಾಡುವರೆಂಬುದನ್ನು ಅರಿತು, ಅಲ್ಲಿಯ ವಿಶೇಷ ವರ್ತಮಾನಗಳೇನಿದ್ದರೂ ತಿಳಿದು ಬನ್ನಿ' ಎಂದು ಹೇಳಿಕಳುಹಿಸಿದನು. ಪಂಜರದ ರಕ್ಷಕರು ಅಲ್ಲಿಂದ ಪ್ರಯಾಣ ಮಾಡಿ ಕೆಲವು ದಿನಗಳಾದ ಮೇಲೆ ಪಾಟಲೀಪುರವನ್ನು ತಲುಪಿದರು.

ಅವರು ಪಾಟಲೀಪುರದ ಅರಮನೆಯ ಬಳಿ ಪಂಜರವನ್ನಿಳಿಸಿ ವಾದ್ಯ ಧ್ವನಿಗೈದು 'ಈ ಪಟ್ಟಣದಲ್ಲಿ ಜಾಣರು ಯಾರಾದರೂ ಇದ್ದರೆ ಅಮಾನುಷ ಕೃತವಾದ ಈ ಪಂಜರವನ್ನು ಛೇದಿಸದೆ, ಇದರ ಒಳಗಡೆ ಇರುವ ಸಿಂಹವನ್ನು ಹೊರಗೆ ತೆಗೆಯಲಿ. ಅಂಥ ಬುದ್ಧಿಶಾಲಿಗಳು ಯಾರೂ ಇಲ್ಲದೇ ಹೋದರೆ ನಮಗೆ ಸನ್ಮಾನಮಾಡಿ ಕಳುಹಿಸಿಕೊಡಿ. ಅನೇಕ ದೇಶಗಳನ್ನು ಸುತ್ತಿ ಬಂದರೂ ಯಾರೂ ಇದನ್ನು ಹೊರಗೆ ತೆಗೆಯಲಾರದೆ ನಮಗೆ ಮರ್ಯಾದೆಯನ್ನು ಸಲ್ಲಿಸಿ ಕಳುಹಿಸಿದರು' ಎಂದು ಘೋಷಿಸುತ್ತಿದ್ದರು. ಆ ವಾಕ್ಯವನ್ನು ಕೇಳಿದ ಪುರಜನರು ಅಲ್ಲಿ ನೆರೆದು ಅದರ ರಹಸ್ಯವನ್ನು ತಿಳಿಯಲಾರದೆ ಹೋಗುತ್ತಿದ್ದರು.

ದೂತರು ಆ ಪಂಜರ ಸಿಂಹದ ವಿಚಾರವನ್ನು ಆಸ್ಥಾನದಲ್ಲಿದ್ದ ನಂದರಿಗೆ ಅರಿಕೆಮಾಡಿದರು. ಪಟ್ಟಣಿಗರು ಅದನ್ನು ಪರೀಕ್ಷಿಸಲು ಅಸಮರ್ಥರಾದ

ರೆಂಬುದನ್ನು ಅವರು ಕೇಳಿ ತಮ್ಮ ಮಂತ್ರಿಗಳು ಹೋಗಿ ಪರೀಕ್ಷಿಸಲೆಂದು ಆಣತಿಯಿತ್ತರು. ಅದರಂತೆ ಅಮಾತ್ಯರಾಕ್ಷಸನೊಬ್ಬನು ಹೊರತು ಮಿಕ್ಕ ಮಂತ್ರಿಗಳೆಲ್ಲಾ ಆ ಪಂಜರದ ಬಳಿಗೆ ಹೋಗಿ ನೋಡಿ ಅದರ ಗುಟ್ಟು ಅವರಿಗೂ ತಿಳಿಯದೆ ಹಿಂದಿರುಗಿ ಬಂದರು. ಆಗ ಅಮಾತ್ಯನು – ಸಿಂಹಸಮೇತವಾದ ಪಂಜರವು ಅಮಾನುಷಕೃತವೆಂದರೆ ನಂಬತಕ್ಕದ್ದಲ್ಲ. ನಮ್ಮ ಬುದ್ಧಿ ಪರೀಕ್ಷಾರ್ಥವಾದ ಶತ್ರುರಾಜರು ನಿರ್ಮಿಸಿ ಕಳುಹಿಸಿರುವ ಕಪಟಸಿಂಹವೆಂದು ತೋರುತ್ತಿದೆ. ಇರಲಿ; ಈ ಪುರದ ಬುದ್ಧಿಶಾಲಿಗಳು ಬಂದು ಪರೀಕ್ಷಿಸಲಿ. ನಮ್ಮ ಭಟರು ಈ ಸಂಗತಿಯನ್ನು ರಾಜಬೀದಿಗಳಲ್ಲಿ ಸಾರುತ್ತಾ ಬರಲಿ. ಇದನ್ನು ಪರೀಕ್ಷಿಸತಕ್ಕ ಬುದ್ಧಿಶಾಲಿಗಳು ಸಿಕ್ಕಿದರೂ ಸಿಗಬಹುದು. ಹಾಗೂ ಸಾಧ್ಯವಾಗದೆ ಹೋದರೆ ನಾವೇ ತರಿಸಿ ಪರೀಕ್ಷಿಸೋಣ–ಎಂದು ನಂದರಿಗೆ ತಿಳಿಸಿದನು.

ರಾಜಭಟರು ನಂದರ ಆಜ್ಞೆಯಂತೆ ರಾಜಬೀದಿಯಲ್ಲಿ ಸಾರುತ್ತಾ ಬರುತ್ತಿದ್ದರು. ಸೆರೆಮನೆಯ ಒಳಗಡೆ ಬಾಗಿಲ ಬಳಿ ನಿಂತಿದ್ದ ಚಂದ್ರಗುಪ್ತನು ಆ ದೂತರನ್ನು ಹತ್ತಿರ ಕರೆದು ‘ ಈ ದೊಡ್ಡ ಪಟ್ಟಣದಲ್ಲಿ ಪಂಜರ ಪರೀಕ್ಷಕರು ಯಾರೂ ದೊರಕಲಿಲ್ಲವೇ ?’ ಎಂದು ಪ್ರಶ್ನಿಸಿದನು. ದೂತರು ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ ನಂದರ ಬಳಿಗೆ ಬಂದು ‘ತಮ್ಮ ಅಪ್ಪಣೆಯಂತೆ ಪಟ್ಟಣದಲ್ಲೆಲ್ಲಾ ಸಾರಿದೆವು. ಅನೇಕರು ಬಂದು ನೋಡಿ ಅದರ ಪರೀಕ್ಷೆ ತಿಳಿಯದೆ ಇದು ಅಮಾನುಷಕೃತ್ಯವೇ ಸರಿಯೆಂದು ಹೇಳಿಕೊಂಡು ಹೋದರು. ಆದರೆ ಕಾರಾಗೃಹದ ಒಳಬಾಗಿಲಲ್ಲಿ ನಿಂತಿದ್ದ ಒಬ್ಬನು ನಮ್ಮನ್ನು ಕುರಿತು––ಈ ದೊಡ್ಡ ಪಟ್ಟಣದಲ್ಲಿ ಪಂಜರ ಪರೀಕ್ಷಕರು ಯಾರೂ ದೊರಕಲಿಲ್ಲವೆ––ಎಂದು ಕೇಳಿದನಲ್ಲದೆ ಮತ್ತಾರೂ ಇದರ ವಿಚಾರ ಪ್ರಸ್ತಾಪಿಸಲೇ ಇಲ್ಲ’ ಎಂದು ಬಿನ್ನೈಸಿದರು.

ಅದನ್ನು ಕೇಳಿ ನಂದರು––ಹಾಗಿದ್ದರೆ ಅವನು ಪ್ರಾಜ್ಞನೇ ಆಗಿರಬೇಕು. ಇದರ ಪರೀಕ್ಷೆಯನ್ನು ಅವನು ಮಾಡಿದರೆ ಅವನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ವಿಶೇಷ ಸನ್ಮಾನವನ್ನು ಮಾಡೋಣ. ಅವನನ್ನು ಕರೆದುಕೊಂಡು ಬನ್ನಿ––ಎಂದು ಭಟರಿಗೆ ಆಜ್ಞಾಪಿಸಿದರು.

ದೂತರು ಚಂದ್ರಗುಪ್ತನನ್ನು ಪಂಜರದ ಬಳಿಗೆ ಕರೆತಂದರು. ಅವನು ಪಂಜರವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದನು. ಪಂಜರ ರಕ್ಷಕನು ಕೈ



ಚಂದ್ರಗುಪ್ತನಿಂದ ಸಿಂಹಪರೀಕ್ಷೆ.

ಸಲಾಕೆಯ ತುದಿಯ ಮಾಂಸವನ್ನು ಸಿಂಹಕ್ಕೆ ತೋರಿಸಿದಾಗ ಅದು ಜೀವಂತ ಸಿಂಹದಂತೆ ಚಲಿಸುತ್ತಿದ್ದುದನ್ನೂ ಗಮನಿಸಿದನು. ಈ ಪಂಜರವು ಅಖಂಡವಾಗಿ ಎರಕದಿಂದ ಮಾಡಿದ್ದಾಗಿದೆ; ಇದರೊಳಗೆ ಜೀವಂತ ಸಿಂಹವು ಹೋಗಲು ಸಾಧ್ಯವಿಲ್ಲ. ಇದರಲ್ಲಿ ಏನೋ ಕಪಟವಿರಬೇಕು' ಎಂದು ನಿಶ್ಚೈಸಿದನು. ದೂತರಿಂದ ಮಾಂಸವನ್ನು ತರಿಸಿ ಅದನ್ನು ಸಿಂಹಕ್ಕೆ ಕೊಡಲು ಅದು ಚಲಿಸದೆ ಹಾಗೆಯೇ ಇದ್ದಿತು. ತಾನು ಕೊಟ್ಟ ಮಾಂಸವನ್ನು ಅದೇಕೆ ಗ್ರಹಿಸಲಿಲ್ಲವೆಂದು ಪಂಜರ ರಕ್ಷಕರನ್ನು ಪ್ರಶ್ನಿಸಲು, ಅವರು ತಮ್ಮ ಮನಸ್ಸಿನಲ್ಲಿ ಆತಂಕಪಡುತ್ತ 'ಈ ಸಿಂಹವು ಅಮಾನುಷಕೃತವಾದುದರಿಂದ ಉಪಾಸಕರು ಕೊಟ್ಟ ಆಹಾರವನ್ನು ಮಾತ್ರ ಗ್ರಹಿಸುವುದಲ್ಲದೆ ಅನ್ಯರು ಕೊಟ್ಟದ್ದನ್ನು ಗ್ರಹಿಸುವುದಿಲ್ಲ' ಎಂದು ಉತ್ತರವಿತ್ತರು.

ಚಂದ್ರಗುಪ್ತನು ಅವರು ಕಪಟವನ್ನು ನುಡಿದರೆಂದು ಅರ್ಥಮಾಡಿಕೊಂಡನು. ಹಾಗೆಯೇ "ಈ ಪಂಜರದವನು ಪಂಜರವನ್ನು ಬಳಸಿ ಬರುತ್ತಿದ್ದರೆ ಮಾಂಸಾಭಿಲಾಷೆಯಿಂದಲೋ ಎಂಬಂತೆ ಅವನು ಬಂದ ಕಡೆ ತಾನೂ ತಿರುಗುತ್ತಿರುವುದರಿಂದಲೂ ಸಲಾಕೆಯ ತುದಿಯ ಮಾಂಸವನ್ನು ಹತ್ತಿರ ಹಿಡಿದಾಗ ಮಾಂಸವನ್ನು ಕಚ್ಚುವಂತೆ ಬಾಲವನ್ನು ಆಡಿಸುತ್ತ ಅದರ ಕಡೆಗೆ ಎರಗುವುದರಿಂದಲೂ ಜೀವಸಿಂಹವೇ ಎಂಬಂತೆ ತೋರುತ್ತಿದೆ. ಆದರೆ ಇದು ಜೀವಂತ ಸಿಂಹವಾಗಿರಲಾರದು. ಅರಗು ಮೇಣ ಮೊದಲಾದ ಸರಿಗಳಿಂದ ತೊಡೆಯಲ್ಪಟ್ಟ ಬಟ್ಟೆಗೆ ಸಿಂಹದ ರೋಮಗಳನ್ನು ಹತ್ತಿಸಿ ಚರ್ಮದಂತೆ ಮಾಡಿ ಉಕ್ಕಿನಿಂದ ಮಾಡಿದ ಸಿಂಹದ ಆಕಾರಕ್ಕೆ ಸರಿಯಾಗಿ ಸೇರಿಸಿ ಅಲ್ಲಿಗಲ್ಲಿಗೆ ಬಣ್ಣವನ್ನು ಬರೆಯಿಸಿ ಮಾಡಿಸಿದ ಶಿಲ್ಪಚಾತುರ್ಯದ ಕೃತ್ರಿಮ ಸಿಂಹವಾಗಿರಬೇಕು. ಆದಾಗ್ಯೂ ಇನ್ನೊಂದು ಪರೀಕ್ಷೆ ನಡೆಸಿ ನೋಡಬೇಕೆಂದು ಯೋಚಿಸಿದನು.

ಅರಮನೆಯ ಲಾಯದಿಂದ ಒಂದು ಮರಿಯಾನೆಯನ್ನು ತರಿಸಿ, ಅದರ ಕಣ್ಣುಗಳನ್ನು ಕಟ್ಟಿಸಿ ಅದು ಆ ಪಂಜರವನ್ನು ಬಳಸಿ ಬರುವಂತೆ ಮಾಡಿದನು. ಅದನ್ನು ನೋಡಿ ಆ ಪಂಜರದ ಸಿಂಹವು ಆರ್ಭಟಿಸದೇ ಇದ್ದುದರಿಂದ ಅದು ಕಪಟಸಿಂಹವೆಂದು ನಿಸ್ಸಂದೇಹವಾಗಿ ಗೊತ್ತಾಯಿತು. 'ಸಲಾಕೆಯನ್ನು ಹಿಡಿದ ಕಡೆ ಅದು ತಿರುಗುವುದನ್ನು ನೋಡಿದರೆ ಈ ಸಲಾಕೆಯು 'ಸೂಜಿಗಲ್ಲಿನ ಸತ್ವದಿಂದ ಮಾಡಿರಬೇಕು, ಸೂಜಿಗಲ್ಲು ಉಕ್ಕನ್ನು ಆಕರ್ಷಿಸುವುದು. ಆದುದ

ರಿಂದ ನನ್ನ ತೀರ್ಮಾನ ತಪ್ಪಾಗದು' ಎಂದು ನಿರ್ಧರಿಸಿಕೊಂಡನು. ಅದನ್ನೂ ಪರೀಕ್ಷಿಸಬೇಕೆಂದು ಪಂಜರದವನನ್ನು ಅವನ ಸಲಾಕಿಯನ್ನು ಬಿಟ್ಟು ಪಂಜರವನ್ನು ಬಳಸಿ ಬರುವಂತೆ ಹೇಳಿದನು. ಅವನು ಆ ಮಾತನ್ನು ಕೇಳಿ ತನ್ನ ಮನಸ್ಸಿನಲ್ಲಿ 'ಯಾರಿಗೂ ಗೊತ್ತಾಗದೇ ಇದ್ದ ಸಲಾಕಿಯ ಮರ್ಮವನ್ನು ಈತನು ಅರಿತನು. ಈತನು ಕಪಟಶಿಲ್ಪೋಪಾಯ ಪರೀಕ್ಷೆಯಲ್ಲಿ ಸಮರ್ಥನಾಗಿದ್ದಾನೆ. ನಮ್ಮ ಕಪಟವು ಈತನಿಂದ ಬಯಲಾಗಬಹುದು' ಎಂದು ಯೋಚಿಸಿ 'ಪರೀಕ್ಷಕರೆ, ಜನ್ಮಾರಭ್ಯ ಈ ಸಲಾಕಿಯ ತುದಿಯ ಮಾಂಸದಿಂದಲೇ ಜೀವಿಸಿರುವ ಈ ಸಿಂಹವು ಸಲಾಕಿಯನ್ನು ಬಿಟ್ಟರೆ ಮಾಂಸದ ಆಸೆಯನ್ನೇ ಬಿಟ್ಟುಬಿಡುವುದಲ್ಲದೆ ನಮ್ಮಲ್ಲಿ ವಿಶ್ವಾಸವನ್ನೂ ತ್ಯಜಿಸುವುದು. ಅದಕ್ಕಾಗಿ ಈ ಸಲಾಕಿಯನ್ನು ಬಿಡಕೂಡದು' ಎಂದು ಉತ್ತರವಿತ್ತನು.

ಆ ಮಾತಿಗೆ ಚಂದ್ರಗುಪ್ತನು—ಎಲೈ, ಸೂಜಿಗಲ್ಲಿನೆದುರಿಗೆ ಉಕ್ಕು, ಕಬ್ಬಿಣ, ಸಲಾಕಿ ಇವುಗಳ ಸಹಾಯದಿಂದ ಯುಕ್ತವಾದ ಈ ಕೃತಕಸಿಂಹವು ಹಲವು ಬಗೆಯಲ್ಲಿ ಚಲಿಸುವುದರಲ್ಲಿ ಆಶ್ಚರ್ಯವೇನಿದೆ? ಇದರಂತೆ ಅರಗುಮೇಣಗಳು ಬೆಂಕಿಯ ಶಾಖಕ್ಕೆ ಕರಗುವುದೂ ಲೋಕಪ್ರಸಿದ್ಧವಲ್ಲವೆ? ಇನ್ನು ನಿಮ್ಮ ಕಪಟೋಕ್ತಿಯನ್ನು ಸಾಕುಮಾಡಿ—ಎಂದು ನುಡಿಯಲು ಆ ಪಂಜರರಕ್ಷಕರು ನಾಚಿಕೆಯಿಂದ ತಲೆತಗ್ಗಿಸಿ, ಕೈಮುಗಿದು ತಾವು ಪರಾಜಿತರಾದೆವೆಂದು ಹೇಳುತ್ತ ಸಲಾಕಿಯನ್ನು ಚಂದ್ರಗುಪ್ತನಿಗೆ ಒಪ್ಪಿಸಿದರು.

ಆಗ ಚಂದ್ರಗುಪ್ತನು ಮನಸ್ಸಿನಲ್ಲಿ 'ಈ ಕೃತಕಸಿಂಹ ಪ್ರಸಂಗವನ್ನು ಯೋಚಿಸಿ ನೋಡಿದರೆ ನಂದರು ಕಪಟದಿಂದ ಮೌರ್ಯರನ್ನು ಸಂಹರಿಸಿದರೆಂಬ ವಾರ್ತೆಯು ದೇಶಾಂತರಗಳಲ್ಲಿ ಪ್ರಸಿದ್ಧವಾಗಿರಬೇಕು. ಅದಕ್ಕಾಗಿ ಯಾರೋ ಪರರಾಜರು ಕಪಟಿಗಳಾದ ನಂದರ ವಿಡಂಬನಾರ್ಥವಾಗಿ ಕಪಟಶಿಲ್ಪವನ್ನು ರಚಿಸಿ ಇಲ್ಲಿಯ ಜನರ ಬುದ್ಧಿ ಪರೀಕ್ಷಾರ್ಥವಾಗಿ ಕಳುಹಿಸಿರಬೇಕು. ಇದರಿಂದ ನಂದರನ್ನು ನಿಂದಿಸುವ ಶತ್ರುಗಳು ಉಂಟಾಗಿರುವುದರಲ್ಲಿ ಸಂಶಯವಿಲ್ಲ. ಈಗ ಕಪಟವು ಬಯಲಾದುದರಿಂದ ಈ ಪಂಜರರಕ್ಷಕರು ಶತ್ರುಪಕ್ಷದವರಿರಬೇಕೆಂಬ ಕಾರಣದಿಂದ ಶಿಕ್ಷಿಸಲ್ಪಡುವರು. ಈ ಪಂಜರದ ನಿಮಿತ್ತವಾಗಿ ನನಗೆ ಬಂಧವಿಮೋಚನೆಯಾಗಬಹುದು. ಈ ದೂತರ ವೇಷಭೂಷಣಗಳನ್ನು ನೋಡಿದರೆ ಪರ್ವತರಾಜನ ಕಡೆಯವರಿರಬಹುದೆಂದು ತೋರುತ್ತಿದೆ. ಇವರನ್ನು ಈಗಲೇ

ಇಲ್ಲಿಂದ ತಪ್ಪಿಸಿಕೊಂಡು ಹೋಗುವಂತೆ ಮಾಡಬೇಕು' ಎಂದು ಯೋಚಿಸಿ ಕಣ್ಣು ಸನ್ನೆಯಿಂದ ಅವರು ಅಲ್ಲಿಂದ ಬೇಗನೆ ಹೊರಡುವಂತೆ ಸೂಚನೆ ಯಿತ್ತನು.

ಪಂಜರರಕ್ಷಕರು ಆ ಸೂಚನೆಯನ್ನು ಗ್ರಹಿಸಿ, ಆತನು ಚಂದ್ರಗುಪ್ತನಾಗಿರ ಬೇಕೆಂದು ಊಹಿಸಿ, ಅಲ್ಲಿ ನಿಲ್ಲುವುದು ತಮಗೆ ಅಪಾಯಕಾರಿಯೆಂದು ಭಾವಿಸಿ, ತಮ್ಮ ಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಬೈರಾಗಿಗಳ ವೇಷದಿಂದ ತಪ್ಪಿಸಿ ಕೊಂಡು ಓಡಿಹೋದರು. ನಡೆದ ಸಂಗತಿಯನ್ನು ಪರ್ವತರಾಜನಿಗೆ ವಿಸ್ತಾರ ವಾಗಿ ತಿಳಿಸಿದರು.

ರಾಜಭಟರು ನಂದರಿಗೆ ಸಿಂಹವು ಪರೀಕ್ಷಿತವಾಗಿ ಪಂಜರರಕ್ಷಕರು ಪರಾಜಿತರಾದುದನ್ನು ವಿಜ್ಞಾಪಿಸಿಕೊಂಡರು. ನಂದರು ಸಂತೋಷದಿಂದ ಪರೀಕ್ಷಕ ನನ್ನು ನೋಡುವ ಕುತೂಹಲದಿಂದ ಪಂಜರದ ಬಳಿಗೆ ಬಂದರು. ಪಂಜರ ಪರೀಕ್ಷಕನು ಚಂದ್ರಗುಪ್ತನೆಂದು ಗೊತ್ತಾದಾಗ ಅವರ ಮನಸ್ಸಿನ ನೆಮ್ಮದಿಗೆ ಭಂಗವುಂಟಾಯಿತು. ಅವರು ಅದನ್ನು ಹೊರಗೆ ತೋರ್ಪಡಿಸಿಕೊಳ್ಳದೆ ಅದು ಜಡಸಿಂಹವೆಂದು ಗೊತ್ತಾದುದು ಹೇಗೆಂದು ಪ್ರಶ್ನೆಮಾಡಿದರು. ಚಂದ್ರಗುಪ್ತನು ಬೆಂಕಿಯನ್ನು ಉರಿಮಾಡಿಸಿ ಆ ಪಂಜರದ ಬಳಿ ಇರಿಸಲು ಬೆಂಕಿಯ ಶಾಖಕ್ಕೆ ಸಿಂಹದ ಮೇಲೆ ತೊಡೆದಿದ್ದ ಅರಗುಮೇಣಗಳು ಕರಗಿ ಸಲಾಕಿಗಳು ಮಾತ್ರ ನಿಂತುವು. ಅದನ್ನು ಕಂಡು ನಂದರು ಆಶ್ಚರ್ಯಪಟ್ಟರು. ಅವರಿಗೆ ಒಂದುಕಡೆ ತಮ್ಮ ನಗರದಲ್ಲಿ ಪಂಜರ ಪರೀಕ್ಷೆ ಆಗಿ ತಮ್ಮ ಗೌರವ ಉಳಿಯಿತೆಂಬ ಸಂತೋಷ; ಮತ್ತೊಂದು ರೀತಿಯಲ್ಲಿ ಚಂದ್ರಗುಪ್ತನಿಂದ ಅದು ಆದುದರಿಂದ ಮಹಾಬುದ್ಧಿಶಾಲಿಯಾದ ಶತ್ರು ಉಳಿದನೆಂಬ ವ್ಯಸನ.

ಆಗ ವೃದ್ಧಮಂತ್ರಿಯಾದ ವಕ್ರನಾಸನು--ಯಾರಿಂದಲೂ ಶಕ್ಯವಾಗದ ಪಂಜರ ಪರೀಕ್ಷೆಯು ನಿಮ್ಮ ಮಗನಿಂದಲೇ ಆದುದರಿಂದ ನಿಮ್ಮ ವಂಶದ ಕೀರ್ತಿ ಹೆಚ್ಚಿತು. ಬುದ್ಧಿಶಾಲಿಯೂ ಬಂಧುವೂ ಆಗಿರುವ ಈ ಚಂದ್ರಗುಪ್ತನನ್ನು ಕಾರಾಗೃಹದಿಂದ ಬಿಡುಗಡೆಮಾಡಿ ಯಥೋಚಿತ ಅಧಿಕಾರವನ್ನು ಕೊಟ್ಟರೆ ಮುಂದೆ ಅವನಿಂದ ನಿಮಗೆ ಹೆಚ್ಚಿನ ಉಪಕಾರವಾಗಬಹುದು. ಹಾಗೆ ಮಾಡುವುದರಿಂದ ನೀವು ಸಭೆಯಲ್ಲಿ ನುಡಿದ ಮಾತೂ ಸತ್ಯವಾಗುವುದು—

ಎಂದು ನಂದರಲ್ಲಿ ವಿಜ್ಞಾಪಿಸಿಕೊಂಡನು. ಸುಮತಿಯೆಂಬ ಮತ್ತೊಬ್ಬ ಮಂತ್ರಿಯೂ ಅದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

ನಂದರು ಮನಸ್ಸಿನಲ್ಲಿ 'ಈ ಮಂತ್ರಿಗಳ ಮಾತಿನಂತೆ ನಡೆದರೆ ಶತ್ರುಶೇಷವು ಉಳಿಯುವುದು. ಮಾಡದಿದ್ದರೆ ಆಡಿದ ಮಾತಿಗೆ ತಪ್ಪಿದರೆಂಬ ಜನಾಪವಾದವುಂಟಾಗುವುದು' ಹೀಗೆಂದು ಯೋಚಿಸಿ ಕಡೆಗೆ ಅಮಾತ್ಯರಾಕ್ಷಸನ ಸಲಹೆಯಂತೆ ಚಂದ್ರಗುಪ್ತನನ್ನು ಸೆರೆಮನೆಯಿಂದ ಬಿಡಿಸಿ, ಅನ್ನಸತ್ರದ ಅಧಿಕಾರದಲ್ಲಿ ನೇಮಿಸಿದರು.

ಬಂಧಮುಕ್ತನಾದ ಚಂದ್ರಗುಪ್ತನು ಗಂಗಾನದಿಯಲ್ಲಿ ಸ್ನಾನಮಾಡಿ, ತಂದೆ ಮತ್ತು ಸೋದರರಿಗೆ ತಿಲೋದಕವನ್ನು ಕೊಟ್ಟು ಅನ್ನಸತ್ರದ ಅಧಿಕಾರವನ್ನು ಮಾಡಿಕೊಂಡಿದ್ದನು.

## ಅಭ್ಯಾಸ

ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಷಯದ ಹೆಗ್ಗುರುತುಗಳನ್ನು ಉಪಯೋಗಿಸಿಕೊಂಡು ಉತ್ತಮ ಪ್ರಬಂಧ ಬರೆಯಿರಿ.

೧. **ಪುತ್ರಲಾಭ**

1. ಸರ್ವಾರ್ಥಸಿದ್ಧಿರಾಯನ ಪ್ರಭುತ್ವ.
2. ಮಹರ್ಷಿಗಳ ಅನುಗ್ರಹ.
3. ಬಹುಪುತ್ರಲಾಭ.
4 ರಾಜಪುತ್ರರ ಏಳಿಗೆ.

೨. **ಮೌರ್ಯರ ದುರಂತ**

1. ಮೌರ್ಯರ ಏಳಿಗೆ.
2. ನಂದರ ದುರಾಲೋಚನೆ.
3. ಅಮಾತ್ಯನ ಬುದ್ಧಿವಾದ.
4. ಮೋಸದ ಹಂಚಿಕೆ.
5. ಮೌರ್ಯರ ಮರಣ.

೩. ಬುದ್ಧಿಪರೀಕ್ಷೆ

1. ಕಪಟಶಿಲ್ಪದ ರಚನೆ.
2. ಪಾಟಲೀಪುರದಲ್ಲಿ ಪ್ರದರ್ಶನ.
3. ಚಂದ್ರಗುಪ್ತನಿಂದ ಪಂಜರದ ಪರೀಕ್ಷೆ.
4. ಸೆರೆಯಿಂದ ಬಿಡುಗಡೆ.

೪. ಮಾಘಸ್ನಾನ

1. ಸರ್ವಾರ್ಥಸಿದ್ಧಿರಾಜನ ವೃದ್ಧಾಪ್ಯ.
2. ಕಾಶೀಕಾಂಡ ಶ್ರವಣ.
3. ಪ್ರಯಾಗ ಪ್ರಯಾಣ.
4. ಪತ್ನೀವಿಯೋಗ ದುರಂತವಾರ್ತೆ.

'ನಮ್ಮ ನಾಡಿನ ಪುಣ್ಯಕ್ಷೇತ್ರಗಳು' ಎಂಬ ವಿಷಯವಾಗಿ, ನೀವೇ ವಿಷಯ ವಿಭಾಗ ಮಾಡಿಕೊಂಡು ಪ್ರಬಂಧ ಬರೆಯಿರಿ.

---

## ಪ್ರಕರಣ ೨

[ಮಹಾಪ್ರತಿಜ್ಞೆ. ಕಾರ್ಯಸಾಧನೆಯ ಪಥದಲ್ಲಿ. ವಿಜಯ ಯಾತ್ರಾ ಪ್ರಯಾಣ.]

ಕಮಲಬಾಂಧವನು ಆಗ ಗಗನದ ಮಧ್ಯಭಾಗದಲ್ಲಿ ಪ್ರಕಾಶಿಸುತ್ತಿದ್ದನು. ತೀಕ್ಷ್ಣಕರನೆಂಬ ಅವನ ಹೆಸರು ಅನ್ವರ್ಥವಾದಂತೆ ಮಾಡಿತ್ತು ಉರಿಬಿಸಿಲಿನ ತಾಪ. ದಗೆಯನ್ನು ತಾಳಲಾರದೆ ಪಶುಪಕ್ಷಿಗಳು ವೃಕ್ಷಗಳ ನೆಳಲನ್ನಾಶ್ರಯಿಸಿದ್ದುವು. ತರುಗಳ ಶಾಖೆಗಳಿಂದ ಕೇಳಿಬರುತ್ತಿದ್ದ ಪಕ್ಷಿಗಳ ಮಂಜುಳ ನಾದವು ಪಥಿಕರನ್ನು ಮಾರ್ಗಾಯಾಸ ಪರಿಹಾರಕ್ಕಾಗಿ ಅಲ್ಲಿಗೆ ಬನ್ನಿರೆಂದು ಆಹ್ವಾನಿಸುವಂತಿತ್ತು. ಬೀಸುವ ಸುಳಿಗಾಳಿಗೆ ಮೈಯೊಡ್ಡಿ ಮರದಡಿಯಲ್ಲಿ ಮಾರ್ಗಸ್ಥರು ದಣಿವಾರಿಸಿಕೊಳ್ಳುತ್ತಿದ್ದರು. ಮೇಲೆ ಬಿಸಿಲು; ಕೆಳಗೆ ಸುಡುವ ನೆಲ ಹೀಗಿದ್ದರೂ ಲಕ್ಷಿಸದೆ ಒಬ್ಬ ವ್ಯಕ್ತಿಯು ಪಾಟಲೀಪುರದ ಅನ್ನಸತ್ರದ ಮಾರ್ಗದಲ್ಲಿ ಬರುತ್ತಿದ್ದನು. ಹಸ್ತದಲ್ಲಿ ದಂಡಕಮಂಡಲಗಳನ್ನು ಧರಿಸಿ ಉರಿಯುತ್ತಿರುವ ಅಗ್ನಿಯೋ ಎಂಬಂತೆ ಮಹಾತೇಜಸ್ಸಿನಿಂದ ಶೋಭಿಸುತ್ತ ಬರುತ್ತಿದ್ದ ಆತನನ್ನು ನೋಡಿದರೆ ಆತನು ಯಾರೋ ವಿಪ್ರಶ್ರೇಷ್ಠನಿರಬೇಕೆಂದು ಸುಲಭವಾಗಿ ಊಹಿಸಬಹುದಾಗಿದ್ದಿತು.

ಮಾರ್ಗದಲ್ಲಿ ಬರುತ್ತಿದ್ದಾಗ ಆತನ ಪಾದಕ್ಕೆ ಒಂದು ಗರಿಕೆಯ ಬಳ್ಳಿಯು ಸುತ್ತಿಕೊಂಡಿತು. ಅದರಿಂದ ಆ ತೇಜಸ್ವಿಯು ಮುಗ್ಗರಿಸಿ ಭೂಮಿಯನ್ನು ಆಶ್ರಯಿಸಬೇಕಾಯಿತು. ಆಗ ಆತನು ಮಹಾಕ್ರುದ್ಧನಾಗಿ ಜಡವಾದ ಗರಿಕೆಯು ತನಗೆ ತೊಂದರೆಮಾಡಿದುದರಿಂದ ತನ್ನ ದಂಡಾಗ್ರದಿಂದಲೇ ಆ ಗರಿಕೆಯ ಬಳ್ಳಿಯನ್ನು ಮೂಲೋತ್ಪಾಟನೆಮಾಡಿ, ಬಿಸಾಡಿ ಹೋಗುತ್ತಿದ್ದನು.

ಆ ಸಮಯದಲ್ಲಿ ಅನ್ನಸತ್ರದ ಬಳಿಯಿದ್ದ ಚಂದ್ರಗುಪ್ತನು ದೂರದಿಂದಲೇ ಅದನ್ನೆಲ್ಲಾ ನೋಡುತ್ತಿದ್ದನು. ತನ್ನ ಮನಸ್ಸಿನಲ್ಲಿ 'ಈತನಾರೋ ಅಧಿಕ ತೇಜಸ್ವಿಯಾಗಿ ಕಾಣುತ್ತಿರುವನು; ಜೊತೆಗೆ ಮಹಾಕೋಪಿಷ್ಠನು. ಇಂಥ ಕೋಪವಿರುವವರನ್ನುಆಶ್ರಯಿಸಿದರೆ ಕಾರ್ಯಸಿದ್ಧಿಯಾಗುವುದರಲ್ಲಿ ಸಂಶಯವಿಲ್ಲ'ಎಂದು

ಯೋಚಿಸಿ ಆತನ ಸಮೀಪಕ್ಕೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಮಧ್ಯಾಹ್ನವು ಮೀರಿದುದರಿಂದ ತನ್ನ ಆತಿಥ್ಯವನ್ನು ಸ್ವೀಕರಿಸಿ ತೆರಳಬೇಕೆಂದು ಪ್ರಾರ್ಥಿಸಿಕೊಂಡನು. ಆ ಬ್ರಾಹ್ಮಣೋತ್ತಮನು ಅದಕ್ಕೆ ಸಮ್ಮತಿಸಿ ಚಂದ್ರಗುಪ್ತನ ನಿವಾಸಕ್ಕೆ ಬಂದು ಅವನು ಅರ್ಪಿಸಿದ ಅರ್ಘ್ಯಪಾದ್ಯಾದಿಗಳನ್ನು ಪರಿಗ್ರಹಿಸಿ, ಫಲಗಳನ್ನು ಭಕ್ಷಿಸಿ, ವಿಶ್ರಾಂತಿಯನ್ನು ಪಡೆದು ಸಂತುಷ್ಟನಾದನು.

ಬಳಿಕ ಚಂದ್ರಗುಪ್ತನು— ಸ್ವಾಮಿ, ತಮ್ಮ ನಾಮಧೇಯವೇನು ? ತಮ್ಮ ಪಾದಸ್ಪರ್ಶದಿಂದ ಯಾವ ಸ್ಥಳವು ಪಾವನವಾಗಿದೆ? ತಮ್ಮ ಪುಣ್ಯದರ್ಶನಕ್ಕಾಗಿ ಯಾರ ಆತ್ಮಗಳು ತವಕಿಸುತ್ತಿವೆ ? ಕೃಪೆಮಾಡಿ ನನ್ನ ಮನೆಯಲ್ಲಿ ಮೂರು ನಾಲ್ಕು ದಿವಸಗಳಿದ್ದು ನನ್ನ ಸತ್ಕಾರವನ್ನು ಸ್ವೀಕರಿಸಿ ನನ್ನನ್ನು ಆಶೀರ್ವದಿಸಿ ಹೋಗಬೇಕು—ಎಂದು ಬೇಡಿಕೊಂಡನು.

ಅದಕ್ಕೆ ಆ ಭೂಸುರನು—ಅಯ್ಯಾ ಗೃಹಸ್ಥನೆ, ಚಾಣಕ್ಯನೆಂದು ನನ್ನ ಹೆಸರು. ನೈಮಿಶಾರಣ್ಯದ ಮಾರ್ಗವಿಡಿದು ಹೋಗುತ್ತಿದ್ದೇನೆ. ನಿನ್ನ ವಿನಯಾದಿ ಸದ್ಗುಣಗಳು ಮೆಚ್ಚತಕ್ಕವೇ ಸರಿ. ನನ್ನ ವಿಷಯದಲ್ಲಿ ಪೂಜ್ಯ ಭಾವನೆ ತೋರಿಸುತ್ತಿರುವ ನೀನು ಯಾರು ? ನಿನ್ನ ಮಾತಾಪಿತೃಗಳಾರು ? ನಿನ್ನನ್ನು ನೋಡಿದರೆ ರಾಜಸಂತತಿಗೆ ಸೇರಿದವನಂತೆ ಕಾಣುತ್ತಿರುವೆ ? ನೀನೇಕೆ ಇಲ್ಲಿರುವೆ ?—ಎಂದು ಪ್ರಶ್ನಿಸಿದನು.

ಚಂದ್ರಗುಪ್ತನು ತನ್ನ ವಂಶವಿಸ್ತಾರವನ್ನೂ ನಂದರು ಕಪಟದಿಂದ ತನ್ನ ತಂದೆ ಮತ್ತು ಒಡಹುಟ್ಟಿದವರನ್ನು ನಿಗ್ರಹಿಸಿದುದನ್ನೂ ತನಗೆ ಕಾರಾಗೃಹ ವಾಸ ತಪ್ಪಿ, ಅನ್ನಸತ್ರದ ಅಧಿಕಾರ ದೊರಕಿದುದನ್ನೂ ವಿವರವಾಗಿ ತಿಳಿಸಿ, ತನ್ನನ್ನು ಆ ದುರ್ದೆಶೆಯಿಂದ ಪಾರುಮಾಡಿ ರಕ್ಷಿಸಬೇಕೆಂದು ಪ್ರಾರ್ಥಿಸಿ ಕೊಂಡನು. 'ಶತ್ರುಗಳ ಮಧ್ಯದಲ್ಲಿ ಜೀವಿಸಿರುವುದಕ್ಕಿಂತ ಪವಿತ್ರವಾದ ಆಶ್ರಮ ದಲ್ಲಿ ಕಂದಮೂಲಫಲಗಳನ್ನು ತಿಂದು ಬಾಳುವುದೇ ಲೇಸು. ನಿಮ್ಮಂಥ ಮಹಾತ್ಮರ ಪಾದಸೇವೆ ಮಾಡಿಕೊಂಡಿದ್ದರೆ ಉತ್ತಮ ಲೋಕವಾದರೂ ಸಿಕ್ಕುವುದು. ಇಲ್ಲಿ ನಾನು ಯಾವ ಪುರುಷಾರ್ಥಕ್ಕಾಗಿ ಇರಬೇಕು ? ನನ್ನನ್ನೂ ತಮ್ಮೊಡನೆ ಕರೆದುಕೊಂಡುಹೋದರೆ ನಿಮಗೆ ಪುಣ್ಯಲಾಭವಾಗುವುದು' ಎಂದು ದೈನ್ಯದಿಂದ ಕೇಳಿಕೊಂಡನು. ಚಾಣಕ್ಯನು ಕಂಬನಿದುಂಬಿದ ಚಂದ್ರಗುಪ್ತನ ವಿಚಾರವನ್ನು ತಿಳಿದು ಮರುಗಿದನು. ಮನಸ್ಸಿನಲ್ಲಿ 'ಪ್ರಭುತ್ವ

ಲಕ್ಷಣಯುಕ್ತನಾದ ಈತನು ಪ್ರಭುಪದವಿಗೆ ಯೋಗ್ಯನಂತೆ ಕಾಣುತ್ತಿದ್ದಾನೆ ?' ಎಂದು ಭಾವಿಸಿ ಅವನಿಗೆ ಸಮಾಧಾನ ಹೇಳಿದನು.

"ಚಂದ್ರಗುಪ್ತ, ಕ್ಷತ್ರಿಯನೂ ಯೌವ್ವನಶಾಲಿಯೂ ರಾಜಲಕ್ಷಣಗಳನ್ನು ಹೊಂದಿದವನೂ ಆದ ನಿನಗೆ ವನವಾಸವೂ ಕಂದಮೂಲಗಳ ಆಹಾರವೂ ಯೋಗ್ಯವಾದವುಗಳಲ್ಲ. ಅದು ತಪಸ್ವೀ ಜೀವನ. ಕ್ಷತ್ರಿಯನಾದವನು ಕಾರಣಾಂತರಗಳಿಂದ ವಿಪತ್ತಿಗೆ ಸಿಕ್ಕಿದರೆ ಧೈರ್ಯದಿಂದ ಅದನ್ನೆದುರಿಸಿ, ತನ್ನ ಅಭ್ಯುದಯ ಕಾಲವನ್ನು ನಿರೀಕ್ಷಿಸಬೇಕು. ಸಮಯವರಿತು ಬುದ್ಧಿ ಪೌರುಷ ಗಳ ಬಲದಿಂದ ಶತ್ರುಗಳನ್ನು ನಿಗ್ರಹಿಸಿ ಸುಖಿಯಾಗಬೇಕಲ್ಲದೆ ನೀನು ಹೀಗೆ ಧೃತಿಗೆಟ್ಟು ಹೀನಜನರಂತೆ ಹೇಳುವುದು ಸರಿಯಲ್ಲ."

ಆ ಮಾತಿಗೆ ಚಂದ್ರಗುಪ್ತನು—ಪೂಜ್ಯರೆ,ಅಕ್ಕಿಯ ಕಾಳಿನಷ್ಟು ಅಗ್ನಿಯ ಕಿಡಿಯು ಗಾಳಿಯ ಸಹಾಯದಿಂದ ವನವನ್ನೇ ದಹಿಸುವಂತೆ ನಿಮ್ಮ ಕೃಪಾ ಕಟಾಕ್ಷದಿಂದ ನನ್ನ ಅದೃಷ್ಟವು ಶತ್ರುಗಳನ್ನು ನಾಶಪಡಿಸಬೇಕಲ್ಲದೆ ನನ್ನ ಪೌರುಷಬಲದಿಂದ ಶತ್ರುಗಳ ನಾಶವಾಗುವುದು ಅಸಂಭವ. ಮಹಾನುಭಾವರೆ, ನಿಮ್ಮನ್ನೇ ಶರಣು ಹೊಕ್ಕಿದ್ದೇನೆ. ತಮ್ಮ ತೇಜೋಬಲದಿಂದ ಕ್ರೂರಕರ್ಮಿ ಗಳಾದ ನಂದರನ್ನು ನಿಗ್ರಹಿಸಿ ನನ್ನನ್ನು ಉದ್ಧರಿಸಿ—ಎಂದು ಚಾಣಕ್ಯನ ಪಾದ ಗಳನ್ನು ಹಿಡಿದುಕೊಂಡನು.

ಅವನ ವಿನಯಕ್ಕೆ ಮೆಚ್ಚಿ ಚಾಣಕ್ಯನು—ಕುಮಾರ, ನಿನ್ನ ಶತ್ರುಗಳನ್ನು ನಿಗ್ರಹಿಸಿ ನಿನಗೆ ರಾಜ್ಯಾಧಿಪತ್ಯವನ್ನುಂಟುಮಾಡುವ ಸಾಮರ್ಥ್ಯ ನನಗುಂಟು. ಆದರೆ ನಿನಗೆ ಮಾತ್ರವೇ ದ್ರೋಹಿಗಳಾಗಿ ಪ್ರಜಾಪಾಲನೆಯನ್ನು ಮಾಡುತ್ತಿರುವ ನಂದರನ್ನು ಅಕಾರಣವಾಗಿ ನಾನು ಸಂಹರಿಸಿದರೆ ನನಗೆ ಅಪಕೀರ್ತಿಯುಂಟಾ ಗುವುದು. ನನ್ನ ವಿಷಯದಲ್ಲಿ ಅವರು ಅಪರಾಧಿಗಳೇನಾದರೂ ಆದರೆ ಆಗ ಅವರನ್ನು ನಿಗ್ರಹಿಸಲು ಅಡ್ಡಿಯಿಲ್ಲ. ನೀನು ಸಭ್ಯನಾಗಿ ತೋರುತ್ತಿರುವೆ. ಅದರಿಂದ ದುಷ್ಟರಾದ ನಂದರಿಗೆ ನನ್ನಲ್ಲಿ ಕೋಪವುಂಟಾಗುವ ಹಾಗೆ ಧರ್ಮ ವಿರುದ್ಧವಲ್ಲದ ಒಂದು ಕುಚೇಷ್ಟೆಯನ್ನು ಆಚರಿಸುತ್ತೇನೆ. ಅದಕ್ಕೆ ನಂದರು ಕ್ಷಮಿಸದೆ ನಿರಾಕರಿಸಿ ನನಗೆ ಕೋಪವುಂಟಾಗುವಂತೆ ಮಾಡಿಕೊಂಡರೆ ಆಗ ನಿನ್ನ ಕಾರ್ಯಕ್ಕೆ ಅಭಯ ಕೊಡುವೆನು—ಎಂದು ಹೇಳಿ ಮಾಧ್ಯಾಹ್ನಿಕಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದನು.

ಆ ಸಮಯದಲ್ಲಿ ದೈವಯೋಗದಿಂದ ನವನಂದರು ನೂತನವಾಗಿ ನಿರ್ಮಿಸಿದ್ದ ಉದ್ಯಾನದ ರಮಣೀಯತೆಯನ್ನು ನೋಡಿ ಸಂತೋಷಗೊಂಡು ಅರಮನೆಯ ಕಡೆ ಬರುತ್ತ ಮಾರ್ಗದಲ್ಲಿ ಸಿಕ್ಕಿದ ಅನ್ನಸತ್ರವನ್ನು ಕಂಡು ಬ್ರಾಹ್ಮಣರ ಭೋಜನ ಪಂಕ್ತಿಯನ್ನು ನೋಡಬೇಕೆಂದು ತಮ್ಮ ವಾಹನಗಳಿಂದಿಳಿದು ಒಳಗೆ ಪ್ರವೇಶಿಸಿದರು. ಚಾಣಕ್ಯನು ಅದೇ ಸಮಯವೆಂದು ಹರಕು ಧೋತ್ರವನ್ನುಟ್ಟು ಪಂಜೆಬ್ರಾಹ್ಮಣನಂತೆ ಆ ಸತ್ರವನ್ನು ಹೊಕ್ಕು ಅಲ್ಲಿದ್ದ ರಾಜಯೋಗ್ಯವಾದ ಸುವರ್ಣ ಪೀಠವನ್ನು ಅಗ್ರಭಾಗದಲ್ಲಿ ಹಾಕಿಕೊಂಡು ಅದರಲ್ಲಿ ಕುಳಿತಿದ್ದನು.

ನಂದರು ಪಂಕ್ತಿಯನ್ನು ನೋಡುತ್ತಾ ಬರುತ್ತಿರಲು ಆ ಬ್ರಾಹ್ಮಣನನ್ನು ಕಂಡು ಮತ್ತರಾಗಿ, ದೈವಸಂಕಲ್ಪದಿಂದ ವಿಮರ್ಶೆಮಾಡದೆ ಕುಪಿತರಾಗಿ "ಈ ಬ್ರಾಹ್ಮಣಾಧಮನು ಯಾರು? ತುಚ್ಛನಂತೆ ಕಾಣುವನು. ಅಗ್ರಸ್ಥಾನಪೀಠದಲ್ಲಿ ಕಾಲಮೇಲೆ ಕಾಲನ್ನು ಹಾಕಿಕೊಂಡು ಎಲ್ಲರಿಗಿಂತ ತಾನೇ ಅಧಿಕನಾಗಿರುವಂತೆ ಕುಳಿತಿದ್ದಾನೆ. ಇದನ್ನು ನೋಡಿಯೂ ನೀವೇಕೆ ಸುಮ್ಮನಿರುವಿರಿ. ಇವನನ್ನು ಎಳೆದು ಹೊರಗೆ ನೂಕಿ" ಎಂದು ದೂತರಿಗೆ ಆಜ್ಞಾಪಿಸಿದರು. ರಾಜಭಟರು "ಏಳು, ಏಳು, ಎಂದು ಚಾಣಕ್ಯನನ್ನು ಬೆದರಿಸಿದರೂ ಆತನು ಅವರ ಮಾತುಗಳನ್ನು ಲಕ್ಷಿಸದೆ ಮೊದಲಿನಂತೆಯೇ ಕುಳಿತಿದ್ದನು. ಕೋಪಗೊಂಡ ದೂತರು ಚಾಣಕ್ಯನ ರೆಟ್ಟೆಹಿಡಿದು ಈಚೆಗೆ ಎಳೆದರು. ಅವರು ಎಳೆದ ರಭಸಕ್ಕೆ ಅವನ ಜುಟ್ಟುಗಂಟು ಬಿಚ್ಚಿಹೋಯಿತು.

ಆಗ ಚಾಣಕ್ಯನು ಚಂದ್ರಗುಪ್ತನ ಅದೃಷ್ಟ ಒದಗಿಬಂತೆಂದು ತಿಳಿದು ಮಹಾಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ಹುಬ್ಬುಗಂಟಿಕ್ಕಿ ಪೀಠವನ್ನು ಒದೆದನು. ಕ್ರುದ್ಧ ಮೃತ್ಯುವಿನಂತೆ ಔಡುಕಚ್ಚುತ್ತ, ಹಲ್ಲುಗಳನ್ನು ಮಸೆಯುತ್ತ, ಪಾದಗಳನ್ನು ನಡುಗಿಸುತ್ತ ನಂದರ ಕಡೆಗೆ ದುರದುರನೆ ನೋಡುತ್ತ ಮಹಾಪ್ರತಿಜ್ಞೆ ಮಾಡಿದನು.

"ದುರಾತ್ಮರಾದ ರಾಜಪುತ್ರರಿರಾ, ಅತಿಥಿಯಾಗಿ ಬಂದ ನಿರಪರಾಧಿಯಾದ ನನ್ನನ್ನು ಬ್ರಾಹ್ಮಣಾಧಮನೆಂದೂ ತುಚ್ಛನೆಂದೂ ದೂಷಿಸಿ, ಎಲ್ಲರ ಎದುರಿನಲ್ಲಿ ಹೇಗೆ ಪೀಠದಿಂದ ಕೆಳಗೆ ಎಳೆಯಿಸಿ ಅಪಮಾನಪಡಿಸಿದರೋ ಹಾಗೆಯೇ

ನಿಮ್ಮನ್ನು ನಿಗ್ರಹಿಸಿ ಕಾಲುಗಳಿಗೆ ಹಗ್ಗವನ್ನು ಜೀರಿಸಿ ನಿಮ್ಮ ಶವಗಳನ್ನು ಬೀದಿಯಲ್ಲಿ ಎಲ್ಲರೂ ನೋಡುತ್ತಿರಲು ಎಳಸಿಹಾಕಿಸಿ ನನ್ನ ಸೇಡನ್ನು ತೀರಿಸಿ ಕೊಳ್ಳದೆ ಹೋದರೆ ನಾನು ಚಾಣಕ್ಯನಲ್ಲ. ಅದುವರೆಗೆ ಈ ಬಿಚ್ಚಿದ ನನ್ನ ಜುಟ್ಟನ್ನು ಕಟ್ಟುವುದಿಲ್ಲ. ಈ ನನ್ನ ಪ್ರತಿಜ್ಞೆಯು ನೆರವೇರದೆ ನಾನು ಜುಟ್ಟು ಕಟ್ಟಿದೆನಾದರೆ ಅಧರ್ಮಿಗಳಿಗೆ ಒದಗುವ ಮಹಾದುರ್ಗತಿಯು ನನಗೆ ಉಂಟಾಗಲಿ."

ಹೀಗೆ ಚಾಣಕ್ಯನು ಕ್ರೂರಪ್ರತಿಜ್ಞೆಯನ್ನು ಮಾಡಿ ಆಗ್ರಹದಿಂದ ಅಲ್ಲಿಂದ ತೆರಳಿದನು. ಆಗ ಮಹೋತ್ಪಾತಕಗಳಾದ ಭೂಕಂಪವೂ ಧೂಮಕೇತುಗಳೂ ಉದ್ಭವಿಸಲು ಅಲ್ಲಿದ್ದ ಜನರು ಏನೋ ಮಹಾವಿಪತ್ತು ಕಾದಿದೆಯೆಂದು ಮಾತನಾಡಿಕೊಳ್ಳುತ್ತಿದ್ದರು. ಆಗ ನಂದರಿಗೆ ದೈವಬಲ ತಪ್ಪಿದ್ದುದರಿಂದ ಆತನನ್ನು ಸಮಾಧಾನಗೊಳಿಸಿ ನಿಲ್ಲಿಸಬೇಕೆಂಬುದು ಅವರ ಬುದ್ಧಿಗೆ ತೋರದೆ ಕೋಪಸಂತಾಪಗಳಿಂದ ಕೂಡಿ ಸುಮ್ಮನೆ ನಿಂತಿದ್ದರು.

ಆಗ ಅಲ್ಲಿದ್ದ ವಕ್ರನಾಸನೆಂಬ ವೃದ್ಧಮಂತ್ರಿಯ ಪುತ್ರನಾದ ಪುಷ್ಪ ದಂತನು ಕಳವಳಗೊಂಡ ನಂದರ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡ ಬೇಕೆಂದು ಬಯಸಿ "ಪ್ರಭುಗಳೆ, ಅನ್ನಕ್ಕಾಗಿ ಇಲ್ಲಿಗೆ ಬಂದು, ಅಗ್ರಸ್ಥಾನ ದಲ್ಲಿರುವ ಸ್ವರ್ಣಮಯವಾದ ಪೀಠದಲ್ಲಿ ಕುಳಿತು ಮನಸ್ಸಿಗೆ ಬಂದಂತೆ ಕೂಗಿ ಹೋದ ಆ ಬ್ರಾಹ್ಮಣನು ಹುಚ್ಚನೆಂದು ತೋರುತ್ತಿದೆ. ಲೋಕದಲ್ಲಿ ಬಾಲಕರ ವಾಕ್ಯವೂ ಹುಚ್ಚರ ಮಾತೂ ವಿನೋದಕ್ಕೆ ಯೋಗ್ಯವಲ್ಲದೆ ವಿಷಾದಕ್ಕೆ ಅರ್ಹ ವಾದುವಲ್ಲ. ನಿಮ್ಮ ಕೋಪಕ್ಕೆ ಪಾತ್ರರಾಗಿ ನಿರ್ವಹಿಸಿಕೊಂಡವರನ್ನು ಈ ಲೋಕದಲ್ಲಿ ಯಾರನ್ನೂ ಕಾಣೆನು. ಈ ಪಂಜೆಬ್ರಾಹ್ಮಣನು ಎಷ್ಟುಮಾತ್ರ ದವನು ?" ಎಂದು ವಿಜ್ಞಾಪಿಸಿಕೊಂಡನು. ನಂದರು ಅಶ್ವಗಳನ್ನೇರಿ ಅರಮನೆ ಯತ್ತ ತೆರಳಿದರು.

ಅತ್ತ ಪರ್ವತರಾಜನಿಂದ ನಿಯಮಿಸಲ್ಪಟ್ಟಿದ್ದ ಗೂಢಚಾರರು ಪಾಟಲೀ ಪುರದಿಂದ ಹೊರಟು ಪರ್ವತರಾಜನ ಬಳಿಗೆ ಬಂದು ಪಾಟಲೀಪುರದಲ್ಲಿ ನಡೆದ ಕಪಟ ಶಿಲ್ಪದ ಪರೀಕ್ಷೆ, ಚಂದ್ರಗುಪ್ತನ ಬಂಧವಿಮೋಚನೆ, ಚಾಣಕ್ಯನ ಪ್ರತಿಜ್ಞೆ ಮುಂತಾದ ವಿಶೇಷ ವರ್ತಮಾನಗಳನ್ನು ಅರಿಕೆಮಾಡಿಕೊಂಡರು. ಪರ್ವತರಾಜನು ಮಂತ್ರಿಮುಖ್ಯನಾದ ಶಬರವರ್ಮನನ್ನು ಬರಮಾಡಿಕೊಂಡು ದೂತರು ಹೇಳಿದ ವಿಷಯವನ್ನು ಪರ್ಯಾಲೋಚಿಸಿದನು.

ಶಬರವರ್ಮನು–ಜೀಯಾ, ಪಂಜರ ಪರೀಕ್ಷಕರು ಪರಾಜಿತರಾಗಿ ಬಂದು ತಿಳಿಸಿದ ಸಂಗತಿಯು ತಮಗೆ ವೇದ್ಯವೇ ಆಗಿದೆ. ದೂತರ ವಚನದಿಂದ ಪಂಜರ ಸಿಂಹವು ಪರ್ವತ ದೇಶಾಧಿಪತಿಗಳಿಂದ ರಚಿಸಲ್ಪಟ್ಟು ನಂದರ ಅವಹೇಳನಾರ್ಥವಾಗಿ ಕಳುಹಿಸಲ್ಪಟ್ಟದ್ದೆಂದು ಚಂದ್ರಗುಪ್ತನು ಚೆನ್ನಾಗಿ ಅರ್ಥಮಾಡಿಕೊಂಡಿರಬಹುದೆಂದು ಊಹಿಸಬಹುದು. ಅವನು ಕ್ರಮೇಣ ಚಾಣಕ್ಯನ ಆಶ್ರಯ ಪಡೆದು ರಾಜಕಾರ್ಯಾರ್ಥವಾಗಿ ಇಲ್ಲಿಗೆ ಬಂದರೂ ಬರಬಹುದು. ಅವನಿಗೆ ಅಂಥ ತೇಜಸ್ವಿಗಳ ಸಹಾಯ ದೊರೆತರೆ ಅದು ಅವನ ಭಾಗ್ಯ. ಆ ತಪಸ್ವಿಯ ಕೋಪಾಗ್ನಿಯು ನಂದಕುಲವೆಂಬ ವನವನ್ನು ದಹಿಸುವುದರಲ್ಲಿ ಸಂದೇಹವಿಲ್ಲ— ಎಂದು ಯುಕ್ತಾಯುಕ್ತ ವಿಚಾರವಾಡಿ ತಿಳಿಸಲು ಆ ಮಾತು ಪರ್ವತ ರಾಜನಿಗೂ ಒಪ್ಪಿಗೆಯಾಗಿ ತೋರಿತು.

ಚಾಣಕ್ಯನು ತನ್ನ ಮನಸ್ಸಿನಲ್ಲಿ ‘ ನನ್ನ ಬುದ್ಧಿಬಲದಿಂದ ನಂದರು ಸಂಹೃತರಾಗಿ ಚಂದ್ರಗುಪ್ತನು ಆದೇ ನಂದರಾಜ್ಯಕ್ಕೆ ಪ್ರಭುವಾಗಿ ನ್ಯಾಯದಿಂದ ಪ್ರಜಾಪರಿಪಾಲನೆಯನ್ನು ಮಾಡುತ್ತ ಯಶೋವಂತನಾಗಿ ಬಾಳಿದರೆ ಲೋಕಕ್ಕೆ ಇದಕ್ಕಿಂತ ಮತ್ತೊಂದು ಕ್ಷೇಮವುಂಟೆ ? ಗೋವುಗಳನ್ನೂ ಪ್ರಜೆಗಳನ್ನೂ ಬಾಧಿಸುವ ಹುಲಿಗಳ ನಿಗ್ರಹದಂತೆ ದುಷ್ಟರಾದ ನಂದರ ನಿಗ್ರಹದಿಂದ ನನಗೆ ಪ್ರತ್ಯವಾಯ ಬರಲಾರದು ’ ಎಂದು ಯೋಚಿಸುತ್ತ ಕುಳಿತಿರುವ ಸಮಯ ದಲ್ಲಿ ಚಂದ್ರಗುಪ್ತನು ಬಂದು ವಂದಿಸಿ ತನ್ನನ್ನು ರಕ್ಷಿಸಬೇಕೆಂದು ಅವರ ಮರೆಹೊಕ್ಕನು.

“ಚಂದ್ರಗುಪ್ತ, ಇನ್ನು ಶತ್ರುಗಳ ಭಯವನ್ನು ಬಿಡುವವನಾಗು. ಇನ್ನು ಸ್ವಲ್ಪಕಾಲದಲ್ಲಿಯೇ ಈ ದುಷ್ಟರಾದ ನಂದರನ್ನು ಸಂಹರಿಸಿ, ಸಾರ್ವಭೌಮ ಪದಕ್ಕೆ ಯೋಗ್ಯವಾದಂಥ ಮಹಾಸಿಂಹಾಸನದಲ್ಲಿ ನಿನ್ನನ್ನು ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿಸಿ, ಆ ವೈಭವವನ್ನು ನೋಡಿ ನಾನು ಕೃತಕೃತ್ಯನೆನಿಸಿ ತದನಂತರ ತಪೋವನಕ್ಕೆ ತೆರಳುವೆನು. ಈ ಮಾತನ್ನು ನಂಬು. ಇದಕ್ಕೆ ನನ್ನ ಸುಕೃತವೇ ಸಾಕ್ಷಿ” ಎಂದು ಚಾಣಕ್ಯನು ಚಂದ್ರಗುಪ್ತನಿಗೆ ಅಭಯಪ್ರಧಾನ ಮಾಡಿದನು.

# ಕಾರ್ಯಸಾಧನೆಯ ಪಥದಲ್ಲಿ

ಚಾಣಕ್ಯನು ಮುಂದೇನು ಮಾಡಬೇಕೆಂಬುದನ್ನು ದೀರ್ಘವಾಗಿ ಚಂದ್ರಗುಪ್ತನೊಡನೆ ಪರ್ಯಾಲೋಚಿಸಿದನು. "ಚಂದ್ರಗುಪ್ತ, ಈ ಭೂಮಿಯಲ್ಲಿರುವ ಮಂಡಲಾಧಿಪತಿಗಳಲ್ಲಿ ನಂದರಿಗೆ ಶತ್ರುಗಳು ಯಾರು? ಮಿತ್ರ ವರ್ಗಕ್ಕೆ ಸೇರಿದವರು ಯಾರು?"

"ಸ್ವಾಮಿ, ಅನೇಕ ಅರಸರು ಅಂತರಂಗದಲ್ಲಿ ನಂದರ ಮೇಲೆ ಮಾತ್ಸರ್ಯ ಹೊಂದಿದ್ದರೂ ರಾಕ್ಷಸನು ಮಾಡುವ ಚತುರೋಪಾಯಗಳಿಂದ ಅವರು ನಂದರಲ್ಲಿ ಅನುರಕ್ತರಾಗಿ ದಾಸಭಾವದಿಂದಿರುವರು. ಈ ಅಮಾತ್ಯರಾಕ್ಷಸನು ಮಹಾಸಮರ್ಥನು. ನನಗೆ ಗೊತ್ತಿರುವಂತೆ ಕಾಶೀದೇಶಾಧೀಶ್ವರನೂ ಮತ್ಸ್ಯ ದೇಶಾಧಿಪತಿಯೂ ನಂದರ ಆಪ್ತವರ್ಗಕ್ಕೆ ಸೇರಿರುವರು. ಕಾಶ್ಮೀರ, ಮಲಯ, ಸಿಂಧು, ಕುಲೂತ, ಪಾರಸಿಕ, ಕಾಂಭೋಜ, ಹೂಣ, ಚೀಣ ಮುಂತಾದ ದೇಶಾಧಿಪತಿಗಳಿಗೆ ನಿಯಾಮಕನಾಗಿರುವ ಪರ್ವತಪ್ರಾಂತ್ಯಾಧಿಪತಿಯು ನಂದರಿಗೆ ಉದಾಸೀನ ಪಕ್ಷದವನು. ನಂದರ ಅವಹೇಳನಾರ್ಥವಾಗಿ ಕಪಟ ಶಿಲ್ಪವನ್ನು ರಚಿಸಿ ಪಾಟಲೀಪುರಕ್ಕೆ ಕಳುಹಿಸಿದ್ದನು. ಆ ಶಿಲ್ಪ ಪರೀಕ್ಷೆಯಿಂದಲೇ ನನಗೆ ಬಂಧವಿಮೋಚನೆಯಾಯಿತು."

"ಕುಮಾರ, ಲೋಕದಲ್ಲಿ ಸ್ವಜನರು ಮಾಡಿದ ಅವಹೇಳನವು ವಿನೋದದಲ್ಲಿ ಪರ್ಯವಸಾನವಾದೀತು. ಅದನ್ನೇ ಅನ್ಯರು ಮಾಡಿದರೆ ವೈರವುಂಟಾಗುವುದು. ಅದು ಹಾಗಿರಲಿ. ಈ ಪುರದಲ್ಲಿ ನಿಮ್ಮ ತಂದೆಯಾದ ಮೌರ್ಯನಲ್ಲಿ ಅನುರಕ್ತರಾಗಿದ್ದ ಅಧಿಕಾರಿಗಳುಂಟೋ. ಇಲ್ಲವೋ?"

"ಸ್ವಾಮಿ, ನನ್ನ ತಂದೆಯು ಮಾಡಿದ ಆದರದಿಂದ ಬಾಗುರಾಯಣ ಮುಖ್ಯರಾದ ಸೇನಾಪತಿಗಳೆಲ್ಲರೂ ಪ್ರಸಿದ್ಧಿಯನ್ನು ಪಡೆದರು. ಈಗ ಆ ಕೃತಜ್ಞತೆಯು ಅವರ ಮನಸ್ಸಿನಲ್ಲಿ ಉಂಟೋ, ಇಲ್ಲವೋ? ಬುದ್ಧಿಪರಾಕ್ರಮಗಳಲ್ಲಿ ನಮ್ಮ ತಂದೆಯು ರಾಕ್ಷಸನಿಗೆ ಸಮಾನನಾದರೂ ಆತನು ಮಾಡುವ ರಾಜ್ಯವಿಚಾರವನ್ನು ನೋಡಿ ಯಾವಾಗಲೂ ತಟಸ್ಥನಾಗಿಯೇ ಇರುತ್ತಿದ್ದನು."

"ಈ ರಾಕ್ಷಸನಲ್ಲಿ ಶೌರ್ಯವುಂಟೆ?"

"ಈ ಸೇನಾಪತಿಗಳೆಲ್ಲರಿಗಿಂತಲೂ ಅಧಿಕ ಶೌರ್ಯವಂತನು. ಇವನು

ಯುದ್ಧಾಸಕ್ತನಾಗಿ ನಿಂತರೆ ಪ್ರತಿಪಕ್ಷಲಕ್ಷವನ್ನಾದರೂ ಭೇದಿಸುವನೆಂದು ಕಂಡು, ಕೇಳಿದ್ದುಂಟು. ರಾಜ್ಯಭಾರನಿರ್ವಾಹವು ರಾಕ್ಷಸನಿಂದಲೇ ನಿಂತಿರುವುದು."

ಅದನ್ನು ಕೇಳಿ ಚಾಣಕ್ಯನು ರಾಕ್ಷಸನ ಗುಣವನ್ನು ಮನಸ್ಸಿನಲ್ಲಿ ಶ್ಲಾಘಿಸುತ್ತ, ಮುಂದೆ ರಾಜಕಾರ್ಯವು ಒದಗಿ ಯುದ್ಧಾರಂಭವಾದರೆ ನಂದರನ್ನು ಶೂರನಾದ ಅಮಾತ್ಯನಿಂದ ಬೇರ್ಪಡಿಸಿ, ಸಂಹರಿಸಿ ಆ ಬಳಿಕ ರಾಕ್ಷಸನನ್ನು ಸಂಗ್ರಹಿಸಬೇಕೆಂದು ನಿಶ್ಚಯಿಸಿದನು. "ಚಂದ್ರಗುಪ್ತ, ಈಗ ಒಂದು ರಹಸ್ಯ ರಾಜಕಾರ್ಯವುಂಟು. ಇದಕ್ಕೆ ನಿನ್ನ ತಂದೆಯಲ್ಲಿ ಅನುರಕ್ತರಾಗಿದ್ದ ಬಾಗು ರಾಯಣಾದಿಗಳ ಸ್ವಹಸ್ತಾಕ್ಷರ ಸಮ್ಮತಿಯಿಂದ ಯುಕ್ತವಾದ ಒಂದು ಪತ್ರವು ಸಿದ್ಧವಾಗಬೇಕಾಗಿದೆ. ಈಗ ನಾನು ಒಂದು ಕಾಗದವನ್ನು ಬರೆದುಕೊಡುವೆನು. ಅದನ್ನು ಆ ಸೇನಾಪತಿಗಳಿಗೆ ತೋರಿಸಿ, ಒಡಂಬಡಿಸಿದಲ್ಲದೆ ಅವರು ನಿನ್ನ ಹಸ್ತಾಕ್ಷರದ ಕಾಗದಕ್ಕೆ ತಮ್ಮ ಸಮ್ಮತಿಯನ್ನು ಬರೆದು ಕೊಡಲಾರರು." ಎಂದು ಹೇಳಿ ತನ್ನ ಅಕ್ಷರದಿಂದ ಪ್ರಕೃತೋಚಿತವಾಗಿ ಒಂದು ಪತ್ರವನ್ನು ಬರೆದು ಚಂದ್ರಗುಪ್ತನ ಕೈಗೆ ಕೊಟ್ಟನು.

"ಕುಮಾರ, ಇದನ್ನು ನೀನು ಓದಿಕೊಂಡು ಅರ್ಥವನ್ನು ಗ್ರಹಿಸಿ ತಿಳಿದ ಬಳಿಕ ಅವರಲ್ಲಿಗೆ ಹೋಗಿ ಸೇನಾಪತಿಗಳಿಗೆ ತೋರಿಸಿದರೆ ಅವರು ನಂಬುವರು. ಆಗ ನಿನ್ನ ಅಕ್ಷರದಿಂದ ಇದಕ್ಕೆ ಪ್ರತ್ಯುತ್ತರವನ್ನು ಬರೆದು ನಿನ್ನ ಹೆಸರಿನ ಸಮ್ಮತಿಯನ್ನು ಹಾಕು. ಅವರು ಸಮ್ಮತಿಗಳನ್ನು ಬರೆಯುವುದಕ್ಕೆ ಮುಂಗಡೆ ಯಲ್ಲಿಯೇ ಸ್ಥಳವನ್ನು ಬಿಟ್ಟು ಅದನ್ನು ಅವರಿಗೆ ತೋರಿಸಿ, ಪ್ರಕೃತೋಚಿತ ವಾದ ಮಾತು ಹೇಳಿದರೆ, ಅವರು ಅದನ್ನು ನೋಡಿಕೊಂಡು ಸಮ್ಮತಿಗಳನ್ನು ಬರೆದು ಕೊಡಬಹುದು. ಅನಂತರ ನೀನು ಅದನ್ನು ತೆಗೆದುಕೊಂಡು ಬಾ. ನೀನು ಬರುವವರೆಗೂ ನಾನು ನೈಮಿಶಾರಣ್ಯದ ಗಂಗಾತೀರದಲ್ಲಿ ಸೋಮೇಶ್ವರಾಲಯದ ಬಳಿಯಿರುವ ನನ್ನ ಮಿತ್ರನಾದ ಇಂದುಶರ್ಮನ ಹತ್ತಿರ ಇರುವೆನು." ಹೀಗೆ ಹೇಳಿ ಚಾಣಕ್ಯನು ತೆರಳಿದನು.

ಚಂದ್ರಗುಪ್ತನು ಚಾಣಕ್ಯನ ಮಾತಿನಂತೆ ರಹಸ್ಯವಾಗಿ ಹೋಗಿ ಬಾಗು ರಾಯಣಾದಿ ಸೇನಾಪತಿಗಳನ್ನು ಕಂಡನು. ಚಂದ್ರಗುಪ್ತನಿಗೆ ಒದಗಿದ ದುರ್ಗತಿಯನ್ನು ನೆನೆದು ಅವರು ಅನುತಾಪವನ್ನು ಸೂಚಿಸಿ ತಮ್ಮನ್ನು ಕಾಣಲು

ಬಂದ ಕಾರಣವನ್ನು ಪ್ರಶ್ನಿಸಿದರು. ಚಂದ್ರಗುಪ್ತನು—ಸೇನಾಪತಿಗಳಿರಾ, ನಿಮ್ಮನ್ನು ಕಂಡುದರಿಂದ ನನ್ನ ಕ್ಲೇಶವು ಕಳೆದು ನನ್ನ ಹಿರಿಯರನ್ನು ಕಂಡಷ್ಟು ಆನಂದವಾಯಿತು. ಪ್ರಕೃತ ಹೇಳತಕ್ಕ ಸಂಗತಿಯೊಂದುಂಟು. ಮೊದಲು ನಮ್ಮ ತಂದೆಯವರು ಕಾಶೀಗಂಗಾತೀರದಲ್ಲಿ ಶಿವಾಲಯವನ್ನು ಕಟ್ಟಿಸಿ, ಅಲ್ಲಿ ಆಗಬೇಕಾದ ನಿತ್ಯಗಟ್ಟಲೆಯ ಆರಾಧನೆಗೂ ಕೈಸಾಲೆ ಮತ್ತು ಗೋಪುರಗಳನ್ನು ಕಟ್ಟಿಸುವುದಕ್ಕೂ ಬೇಕಾಗಿದ್ದ ದ್ರವ್ಯವನ್ನು ಆ ಪಟ್ಟಣದಲ್ಲಿರುವ ಕೇಶವದಾಸನೆಂಬ ವರ್ತಕನ ವಶಕ್ಕೆ ಕೊಟ್ಟು ಅವನಿಂದ ಆ ಕಾರ್ಯ ನೆರವೇರಿಸಬೇಕೆಂದು ನಿಶ್ಚಯಿಸಿದ್ದರು. ನಂದರ ವಂಚನೆಗೆ ಗುರಿಯಾಗಿ ಮರಣೋನ್ಮುಖರಾಗಿದ್ದ ವೇಳೆಯಲ್ಲಿ ಕೇಶವದಾಸನ ಬಳಿಯಲ್ಲಿ ಇರಿಸಿದ್ದ ದ್ರವ್ಯವು ಸಾರ್ಥಕವಾಗದೆ ಅವನಲ್ಲೇ ಉಳಿಯಿತಲ್ಲಾ ಎಂದು ಹಂಬಲಿಸುತ್ತಾ ಮೃತರಾದರು. ಈ ಸಂಗತಿ ನನಗೆ ಗೊತ್ತಿದ್ದುದರಿಂದ ನಾನು ಬಂಧನದಿಂದ ವಿಮುಕ್ತನಾದಮೇಲೆ ನಮ್ಮ ತಂದೆಯವರ ಇಷ್ಟಾರ್ಥವನ್ನು ನೆರವೇರಿಸಬೇಕೆಂದು ಭಾವಿಸಿ ಕೇಶವದಾಸನಿಗೆ ಆ ಕಾರ್ಯವನ್ನು ನಡೆಸಿಕೊಂಡು ಬರುವ ಹಾಗೆ ಕಾಗದವನ್ನು ಬರೆದಿದ್ದೆನು. ಆತನು ಅದಕ್ಕೆ ಪ್ರತ್ಯುತ್ತರ ಬರೆದಿದ್ದಾನೆ. ನೀವು ಈ ಧರ್ಮಕಾರ್ಯವು ಶಾಶ್ವತವಾಗಿ ನಡೆಯುವಂತೆ ಸಮ್ಮತಿಸಬೇಕು—ಎಂದು ತಿಳಿಸಿ ತನ್ನಲ್ಲಿದ್ದ ಕಾಗದವನ್ನು ಅವರಿಗೆ ತೋರಿಸಿದನು.

'ಶ್ರೀಮತ್ ರಾಜಶ್ರೀ ಚಂದ್ರಗುಪ್ತರಾಜರಿಗೆ ಸೇವಕನಾದ ಕಾಶೀ ಕೇಶವದಾಸನು ಮಾಡುವ ವಿಜ್ಞಾಪನೆ ಏನೆಂದರೆ—ನೀವು ನನಗೆ ಬರೆದ ಕಾಗದದ ಅಭಿಪ್ರಾಯವನ್ನು ನೋಡಿಕೊಂಡೆನು. ನಿಮ್ಮ ತಂದೆಯವರಾದ ಮೌರ್ಯರು ಕಾಶಿಯಲ್ಲಿ ತಾವು ಕಟ್ಟಿಸಿದ ಶಿವಾಲಯದ ನಿತ್ಯಾರಾಧನೆಗಾಗಿಯೂ ಕೈಸಾಲೆ ಮತ್ತು ಗೋಪುರಗಳನ್ನು ಕಟ್ಟಿಸುವುದಕ್ಕಾಗಿಯೂ ನಿಮ್ಮಲ್ಲಿ ಇರಲಿ ಎಂದು ನನ್ನ ವಶದಲ್ಲಿ ಇಟ್ಟಿರುವ ದ್ರವ್ಯದ ವಿಷಯವನ್ನು ಸೂಚಿಸಿ, ಈಗ ಆ ಕಾರ್ಯವನ್ನು ನಾನೇ ಮಾಡಿಸುವಂತೆ ನನಗೆ ಬರೆದು ಕಳುಹಿಸಿರುವುದು ಸರಿಯಷ್ಟೆ. ಮೌರ್ಯರಿಗೆ ನೀವು ಸತ್ಪುತ್ರರಾದರೂ ಇನ್ನೂ ಕಿರಿಯವರಾಗಿರುವ ನಿಮ್ಮ ಮಾತಿನಂತೆ ನಾನು ಬಹುದ್ರವ್ಯ ವ್ಯಯವಾಗುವ ಕಾರ್ಯಕ್ಕೆ ಪ್ರಯತ್ನಿಸುವುದಕ್ಕೆ ಹಿಂದುಮುಂದು ನೋಡಬೇಕಾಗಿದೆ. ನೀವು ನಿಮಗಿಂತ ಇನ್ನೂ ದೊಡ್ಡವರಾಗಿಯೂ ಆಪ್ತರಾಗಿಯೂ ಇರುವವರ ಸಂಗಡ ಆಲೋಚಿಸಿ ಅವರ

ಸಮ್ಮತಿಯನ್ನು ಪಡೆದು, ಮುಂದೆ ನನಗೆ ಆಕ್ಷೇಪಣೆಗಳು ಬಾರದೆ ಇರುವಂತೆ ಈ ಕಾಗದಕ್ಕೆ ನಿಮ್ಮೆಲ್ಲರ ಸಮ್ಮತಿಯುಕ್ತವಾದ ಪ್ರತ್ಯುತ್ತರವನ್ನು ಬರೆದು ಕಳುಹಿಸಿದರೆ ನಾನು ನಿಸ್ಸಂದೇಹವಾಗಿ ನಿಮ್ಮ ತಂದೆಗಳು ಆರಂಭಿಸಿದ ಕಾರ್ಯ ವನ್ನು ಸಾಂಗವಾಗಿ ಮಾಡಿಸುತ್ತೇನೆ. ಇದರಿಂದ ನಿಮಗೂ ಕೀರ್ತಿಬರುವುದಲ್ಲದೆ ಧರ್ಮಿಷ್ಠರಾದ ನಿಮ್ಮ ತಂದೆಯವರಿಗೂ ಶಾಶ್ವತವಾದ ಪುಣ್ಯಲೋಕ ಪ್ರಾಪ್ತಿ ಯಾಗುವುದು. ಎಣ್ಣೆಯನ್ನು ಅಳೆದ ಮಾನದಂತೆ ನನಗೂ ಸ್ವಲ್ಪ ಧರ್ಮ ಲಭಿಸುವುದು.'

ಹೀಗೆಂದು ಕೇಶವದಾಸನು ಚಂದ್ರಗುಪ್ತನ ಹೆಸರಿಗೆ ಬರೆದಂತಿದ್ದ ಪತ್ರದ ಒಕ್ಕಣೆಯನ್ನು ನೋಡಿ ಆ ಸೇನಾಪತಿಗಳು— ಅಯ್ಯಾ ಕುಮಾರನೆ, ನಿಮ್ಮ ತಂದೆಯವರು ಪರಮ ಕರುಣಾಶಾಲಿಗಳೂ ಧರ್ಮಿಷ್ಠರೂ ಸ್ವಾಮಿಕಾರ್ಯ ತತ್ಪರರೂ ಆಗಿದ್ದರು. ನಮ್ಮನ್ನು ತಂದೆಯೋಪಾದಿಯಲ್ಲಿ ಸಂರಕ್ಷಿಸುತ್ತಿದ್ದರು. ನಾವು ದುರ್ಭಾಗ್ಯವಶದಿಂದ ಅಂತಹವರನ್ನು ಕಳೆದುಕೊಂಡೆವು. ಅವರು ಮಾಡಿದ ಧರ್ಮಕಾರ್ಯಕ್ಕೆ ಅನುಕೂಲನಾಗಿರುವ ನಿನಗೆ, ಅವರಿಂದ ಉಪಕೃತ ರಾಗಿರುವ ನಾವು ಸಮ್ಮತಿಸುವುದು ಅತಿಶಯವಲ್ಲ. ಆ ವರ್ತಕನಿಗೆ ನಿನ್ನ ಹೆಸರಿನಿಂದ ಪುನಃ ಕಾಗದವನ್ನು ಬರೆದರೆ ಅದಕ್ಕೆ ನಮ್ಮ ಸಮ್ಮತಿಯನ್ನು ಬರೆದುಕೊಡುವೆವು— ಎಂದರು.

ಚಂದ್ರಗುಪ್ತನು ಅಲ್ಲಿಯೇ ಸಮಯೋಚಿತವಾಗಿ ಕೇಶವದಾಸನಿಗೆ ತನ್ನ ಹೆಸರಿನಿಂದ ಒಂದು ಕಾಗದವನ್ನು ಬರೆದು ತನ್ನ ಸಮ್ಮತಿಯ ಸಹಿಯನ್ನು ಹಾಕಿ ಅದನ್ನು ಬಾಗುರಾಯಣಾದಿಗಳ ಕೈಗೆ ಕೊಟ್ಟನು. ಆ ಎಂಟು ಜನರೂ ತಮ್ಮ ತಮ್ಮ ಕೈಬರಹಗಳಿಂದಲೇ ಸಮ್ಮತಿಯ ಸಹಿಗಳನ್ನು ಹಾಕಿ ವಸ್ತ್ರ ತಾಂಬೂಲ ಸಮೇತವಾಗಿ ಆ ಪತ್ರವನ್ನು ಚಂದ್ರಗುಪ್ತನಿಗೆ ಕೊಟ್ಟರು.

ಚಂದ್ರಗುಪ್ತನು ಅಲ್ಲಿಂದ ಹೊರಟು ತಾನಿದ್ದೆಡೆಗೆ ಬಂದು ಅಲ್ಲಿ ತನ್ನ ಜನರಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ ಮತ್ತೆ ತಾನು ಬರುವವರೆಗೂ ಅವರು ಮರೆಯಾಗಿರುವಂತೆ ಉಪಾಯವನ್ನು ತಿಳಿಸಿ, ತಾಯಿಯ ಆಶೀರ್ವಾದ ಪಡೆದು ಅಲ್ಲಿಂದ ನೈಮಿಶಾರಣ್ಯಕ್ಕೆ ಹೋದನು. ತಂದಿದ್ದ ಕಾಗದವನ್ನು ಚಾಣಕ್ಯನಿಗೆ ಕೊಟ್ಟನು. ಚಾಣಕ್ಯನು ಆ ಪತ್ರವನ್ನು ಓದಿಕೊಂಡು ಅದರಲ್ಲಿ ತನ್ನ ಮುಂದಿನ ಕೆಲಸಕ್ಕೆ ಉಪಯುಕ್ತವಾದ 'ಚಂದ್ರಗುಪ್ತನಿಗೆ ಅಭಿಮತವಾದ

ಕಾರ್ಯವು ನಮಗೂ ಅಭಿಮತವು' ಎಂದು ಎಂಟು ಮಂದಿ ಸೇನಾಪತಿಗಳ ಹಸ್ತಾಕ್ಷರ ಸಮ್ಮತಿಗಳು ಇದ್ದ ಕಾಗದದ ಭಾಗವನ್ನು ಮಾತ್ರ ಉಳಿಸಿಕೊಂಡು ಉಳಿದುದನ್ನು ಹರಿದು ಬಿಸಾಡಿದನು.

ಅನಂತರ ಸಕಲ ದಂಡನೀತಿ ಜ್ಯೋತಿಷ ಶಾಸ್ತ್ರಗಳಲ್ಲಿ ಪ್ರವೀಣನಾದ ಇಂದುಶರ್ಮನೊಡನೆ ತಾನು ಬಂದ ಕಾರ್ಯವನ್ನು ತಿಳಿಸಿ 'ನೀನು ನನಗೆ ಸಹಾಧ್ಯಾಯಿಯಾಗಿದ್ದುದು ಸತ್ಯವಾದರೆ ಶರಣಾಗತನಾಗಿರುವ ಚಂದ್ರಗುಪ್ತನ ಕಾರ್ಯಕ್ಕೆ ಸಹಾಯಕನಾಗಬೇಕಾಗಿದೆ. ಬೌದ್ಧಸಂನ್ಯಾಸಿಯ ವೇಷವನ್ನು ಧರಿಸಿ ಜೀವಸಿದ್ಧಿಯೆಂಬ ಹೆಸರಿನಿಂದ ಪಾಟಲೀಪುರದಲ್ಲಿ ಅಮಾತ್ಯರಾಕ್ಷಸನಿಗೆ ಬೇಕಾದವನಂತೆ ವರ್ತಿಸುತ್ತಿದ್ದು ಸಮಯವರಿತು ಸಹಾಯಮಾಡು. ನಿನಗೆ ಆಪ್ತರಾದ ಶಿಷ್ಯರಿಗೂ ಸಮಯೋಚಿತವಾದ ವೇಷಭಾಷಾ ನಾಮಧೇಯಗಳನ್ನು ಕಲ್ಪಿಸಿಕೊಟ್ಟು ಅವರೂ ಪಾಟಲೀಪುರದಲ್ಲಿ ಉನ್ನತ ಅಧಿಕಾರಗಳ ಬಳಿ ಜ್ಯೋತಿಷವೇ ಮೊದಲಾದ ವಿದ್ಯಾಕೌಶಲ್ಯಗಳನ್ನು ತೋರಿಸುತ್ತ ಅವರಲ್ಲಿ ಆಪ್ತರಂತೆ ಆಶ್ರಯಿಸಿಕೊಂಡಿದ್ದು ಅಲ್ಲಿ ನಡೆಯುವ ರಹಸ್ಯ ರಾಜಕಾರ್ಯಗಳನ್ನು ತಿಳಿಸುತ್ತಿರಲಿ. ತಿಳಿದು ಬಂದ ವಿಶೇಷ ವರ್ತಮಾನಗಳನ್ನು ವೇಷಧಾರಿಗಳಾದ ನಿನ್ನ ಶಿಷ್ಯರ ಮೂಲಕ ನನಗೆ ತಿಳಿಸುತ್ತಿರು' ಎಂದು ನಂದನಿಗ್ರಹ ಮೊದಲುಗೊಂಡು ರಾಕ್ಷಸ ಸಂಗ್ರಹದವರೆಗೂ ಮಾಡಬೇಕಾದ ಉಪಾಯ ರಹಸ್ಯಗಳೆಲ್ಲವನ್ನೂ ತಿಳಿಸಿ ಬಹು ಜಾಗರೂಕತೆಯಿಂದಿದ್ದು ಕಾರ್ಯಸಾಧನೆಯನ್ನು ಮಾಡಬೇಕೆಂದು ಎಚ್ಚರಿಕೆಯನ್ನಿತ್ತನು.

"ಬುದ್ಧಿಯಲ್ಲಿ ಬೃಹಸ್ಪತಿಗೂ ನೀತಿಶಾಸ್ತ್ರದಲ್ಲಿ ಶುಕ್ರಾಚಾರ್ಯರಿಗೂ ಸಮಾನರಾದ ತಾವು ನಿಮ್ಮ ಶಿಷ್ಯಸದೃಶನಾದ ನನಗೆ ಇಷ್ಟು ಉಪಚಾರದ ಮಾತು ಹೇಳಬೇಕೆ ? ನೀವು ಹೇಳಿದ ಕಾರ್ಯವನ್ನು ನಾನೂ ನನ್ನ ಶಿಷ್ಯರೂ ಶಿರಸಾವಹಿಸಿ ನಡೆಸುತ್ತೇವೆ" ಎಂದು ಇಂದುಶರ್ಮನು ಚಾಣಕ್ಯನಿಗೆ ಹೇಳಿದನು.

"ಈಗ ನಾನು ನಂದ ನಿಗ್ರಹಾರ್ಥವಾಗಿ ಅಪರಿಮಿತ ಸೇನಾಪರಿವೃತನಾದ ಪರ್ವತೇಶ್ವರನ ಸಮೀಪಕ್ಕೆ ಈ ಚಂದ್ರಗುಪ್ತನೊಡನೆ ಹೊರಡುವೆನು. ನೀನೂ ಈಗಲೇ ಶಿಷ್ಯ ವರ್ಗದವರೊಡನೆ ಪಾಟಲೀಪುರಕ್ಕೆ ಪ್ರಯಾಣಬೆಳೆಸು" ಎಂದು

ಹೇಳಿ ಚಾಣಕ್ಯನು ಚಂದ್ರಗುಪ್ತನ ಸಂಗಡ ಪರ್ವತರಾಜ್ಯಾಭಿಮುಖವಾಗಿ ತೆರಳಿದನು.

ಬಳಿಕ ಇಂದುಶರ್ಮನು ಮಿತ್ರಕಾರ್ಯತತ್ಪರನಾಗಿ ಕ್ಷಪಣಕ ವೇಷವನ್ನು ಧರಿಸಿದನು. ತನ್ನ ಐದು ಜನ ಆಪ್ತ ಶಿಷ್ಯರಿಗೆ ಮಾಸೋಪವಾಸಿ, ಸಿದ್ಧಾರ್ಥಕ ವೇಗಶರ್ಮ, ಸಮಿದ್ಧಾರ್ಥಕ, ಪಶುಲೋಮ-ಎಂಬ ಹೆಸರುಗಳನ್ನಿಟ್ಟು ಅವರಿಗೆ ವೈದ್ಯ, ಮಂತ್ರಜ್ಞ-ಮೊದಲಾದವರ ವೇಷಗಳನ್ನಳವಡಿಸಿ ಅವರು ಪಾಟಲೀ ಪುರದಲ್ಲಿ ಭಾಗುರಾಯಣನೇ ಮೊದಲಾದ ಅಧಿಕಾರಿಗಳ ಹತ್ತಿರ ವೈದ್ಯ ಜ್ಯೋತಿಷ ಮೊದಲಾದ ವಿದ್ಯಾಕೌಶಲ್ಯವನ್ನು ತೋರಿಸುತ್ತಾ ಇದ್ದು ಅಲ್ಲಿ ನಡೆ ಯುವ ವಿಶೇಷ ಸಂಗತಿಗಳನ್ನು ತನಗೆ ವರದಿಮಾಡುವಂತೆ ಹೇಳಿ ಅವರನ್ನು ಕಳುಹಿಸಿದನು. ತಾನೂ ಕುಸುಮಪುರಕ್ಕೆ ಪ್ರಯಾಣಮಾಡಿ ರಾಕ್ಷಸನ ಸ್ನೇಹ ವನ್ನು ಸಂಪಾದಿಸಿಕೊಂಡು ಅವನ ಬಳಿ ಹೋಗಿಬರುತ್ತಾ ತನ್ನ ಕಪಟವು ಲೇಶವಾದರೂ ಪರರಿಗೆ ಅರಿವಾಗದಂತೆ ಪರಮ ಜಾಗರೂಕನಾಗಿ ಇರುತ್ತಿದ್ದನು.

ಪರ್ವತ ರಾಜ್ಯಕ್ಕೆ ಪ್ರಯಾಣ ಬೆಳಸಿದ್ದ ಚಾಣಕ್ಯಚಂದ್ರಗುಪ್ತರು ಕೆಲವು ದಿನಗಳು ಪ್ರಯಾಣ ಮಾಡಿ ಆ ರಾಜ್ಯವನ್ನು ಪ್ರವೇಶಿಸಿದರು. ಚಾಣಕ್ಯನು ಆ ದೇಶದ ಸಂಪತ್ಸಮೃದ್ಧಿಯನ್ನು ಕಂಡು ಮನಸ್ಸಿನಲ್ಲಿ ಆನಂದ ಹೊಂದಿದರೂ ದೀನವದನನಾಗಿ ಸಂಗಡ ಬರುತ್ತಿದ್ದ ಚಂದ್ರಗುಪ್ತನನ್ನು ನೋಡಿ ಚಿಂತೆಗೆ ಕಾರಣವನ್ನು ಬೆಸಗೊಂಡನು.

ಚಂದ್ರಗುಪ್ತನು-ಮಹಾನುಭಾವರೆ, ತನ್ನ ತಂದೆಯು ಮಹಾರಾಜ ಸರ್ವಾರ್ಥಸಿದ್ಧಿಯ ಹೊಟ್ಟೆಯಲ್ಲಿ ಹುಟ್ಟಿದಾಗ್ಯೂ ನಂದರ ಕಪಟದಿಂದ ಕಾರಾ ಗೃಹದಲ್ಲಿ ಸಿಕ್ಕಿಕೊಂಡು ತನ್ನ ಸಂಗಡ ಸಾಯುತ್ತಿದ್ದ ಮಕ್ಕಳನ್ನು ನೋಡುತ್ತ ದುಃಖಿತನಾಗಿ ಪ್ರಾಣವನ್ನು ಬಿಟ್ಟನಲ್ಲಾ ಎಂಬುದೊಂದು ಚಿಂತೆ. ಅನ್ಯಾಯ ವಾದ ಶತ್ರುತ್ವವನ್ನಿಟ್ಟು ನಮ್ಮವರನ್ನು ಕೊಂದ ನಂದರನ್ನು ತಮ್ಮ ಅನುಗ್ರಹ ದಿಂದ ಎಂದಿಗೆ ಸಂಹರಿಸಿ ನಾನು ಪಿತೃಋಣವನ್ನು ತೀರಿಸುವೆನೊ ಎಂಬುದು ಮತ್ತೊಂದು ಚಿಂತೆ. ಈ ವ್ಯಾಕುಲಗಳೆರಡರಿಂದ ರಾತ್ರಿಯಲ್ಲಿ ನನಗೆ ನಿದ್ರೆಯೇ ಬರುವುದಿಲ್ಲ. ತಮ್ಮ ಆಶ್ರಯವು ನನಗೆ ದೊರಕದೇ ಹೋಗಿದ್ದರೆ ಈವರೆಗೆ ನಾನು ಜೀವಿಸುತ್ತಿರಲಿಲ್ಲ-ಎಂದು ಹೇಳಿ ಕಣ್ಣಲ್ಲಿ ನೀರು ತುಂಬಿಕೊಂಡನು.

ಅದನ್ನು ನೋಡಿ ಕರುಣಾದ್ರ್ರಹೃದಯನಾದ ಚಾಣಕ್ಯನು–ಚಂದ್ರಗುಪ್ತ, ಚಿಂತೆಗೂ ಚಿತೆಗೂ ನಡುವೆ ಒಂದು ಸೊನ್ನೆ ಮಾತ್ರ ವ್ಯತ್ಯಾಸವು. ಚಿತೆಯು ಜೀವವಿಲ್ಲದ ಶವವನ್ನು ದಹಿಸಿದರೆ ಚಿಂತೆಯು ಜೀವವುಳ್ಳ ಮನುಷ್ಯರನ್ನೇ ಸುಡುವುದು. ಬುದ್ಧಿವಂತರು ವಿಪತ್ತು ಬಂದ ವೇಳೆಯಲ್ಲಿ ಧೈರ್ಯವನ್ನು ಅವಲಂಬಿಸಬೇಕೇ ಹೊರತು ಚಿಂತೆಗೆ ಆಸ್ಪದ ಕೊಡಬಾರದು—ಎಂದು ಸಮಾಧಾನ ಹೇಳುತ್ತಾ ಬರುತ್ತಿರಲು ಪರ್ವತರಾಜ್ಯದ ರಾಜಧಾನಿಯಾದ ಶಾಹುರೀನಗರವು ಕಾಣಿಸಿತು.

ಚಂದ್ರಗುಪ್ತನು—ಸ್ವಾಮಿ, ಈಗ ಈ ಪುರದ ಈಶಾನ್ಯಭಾಗದಲ್ಲಿ ಸೇನಾ ಪರಿವೃತ ಧ್ವಜವು ಹಾರಾಡುತ್ತಿರುವುದರಿಂದ ಆ ದಿಕ್ಕಿನ ಶತ್ರುರಾಜರ ಮೇಲೆ ದಂಡೆಯಾತ್ರೆಯು ಉಂಟಾಗಿರುವಂತೆ ತೋರುತ್ತಿದೆ. ಈ ಸಮಯದಲ್ಲಿ ತಮ್ಮ ಕಾರ್ಯಭಾರವನ್ನು ಬಿಟ್ಟು ನಮ್ಮ ಕಾರ್ಯಕ್ಕೆ ಪರ್ವತರಾಜನು ಒಡಂಬಡುವನೆ? ನನಗೇಕೋ ಈ ವಿಷಯದಲ್ಲಿ ಶಂಕೆಯುಂಟಾಗಿದೆ—ಎಂದನು.

"ಕುಮಾರ, ಹಾಗೆ ಶಂಕಿಸುವ ಅಗತ್ಯವಿಲ್ಲ. ಏಕೆಂದರೆ ಲೋಕದಲ್ಲಿ ಶ್ರೀಗಂಧದ ತರುವು ತಾನು ಒಣಗಿ ಪರರಿಗೆ ಆನಂದವನ್ನು ಕೊಡುವುದಲ್ಲವೆ? ಅದರಂತೆ ಈ ಪರ್ವತರಾಜನು ಪರಮಗುಣಾಢ್ಯನಾಗಿರುವುದರಿಂದ ನಾವು ಕೇಳಿ ಕೊಂಡರೆ ಪರೋಪಕಾರಕ್ಕಿಂತ ಅತಿಶಯವಾದ ಧರ್ಮವು ಮತ್ತೊಂದಿಲ್ಲವೆಂದು ಭಾವಿಸಿ, ತನ್ನ ಕಾರ್ಯವೆಷ್ಟಿದ್ದರೂ ಅದನ್ನು ಬಿಟ್ಟು ನಮ್ಮ ಕಾರ್ಯಕ್ಕೆ ಸಹಾಯಕ ನಾಗುವನು. ನಮಗೆ ದೈವಬಲ ಒದಗಿಬಂದರೆ ನಾವು ಮಾಡುವ ಉಪಾಯ ಗಳಿಂದ ಈ ರಾಜನಿಗೆ ಈಗ ಒದಗಿರುವ ಆತಂಕವು ತಪ್ಪಿ, ಈ ಪ್ರಯಾಣವೇ ನಮ್ಮ ಕಾರ್ಯಕ್ಕೆ ಉಪಯುಕ್ತವಾಗಿ ಪಾಟಲೀಪುರಾಭಿಮುಖವಾಗುವುದು" ಎಂದು ಸಮಾಧಾನಗೊಳಿಸಿ ಇಬ್ಬರೂ ಆ ಪುರವನ್ನು ಪ್ರವೇಶಿಸಿದರು.

## ವಿಜಯಯಾತ್ರಾ ಪ್ರಯಾಣ

ಮಾರನೆಯ ದಿನ ಚಾಣಕ್ಯನು ಆ ರಾಜನ ಸಮಯವನ್ನು ವಿಚಾರಿಸಿ ಸುಮುಹೂರ್ತವನ್ನು ತಿಳಿದು ಚಂದ್ರಗುಪ್ತನ ಸಂಗಡ ಅರಮನೆಯ ರಾಜದ್ವಾರ ದಲ್ಲಿ ನಿಂತು ದ್ವಾರಪಾಲಕರಿಗೆ ತಾವು ಬಂದಿರುವ ಸಂಗತಿಯನ್ನು ಅರಸರಿಗೆ ಅರಿಕೆಮಾಡಿಕೊಳ್ಳುವಂತೆ ಹೇಳಿಕಳುಹಿಸಿದನು. ಪ್ರತೀಹಾರಿಯೊಬ್ಬನು

ರಾಜಾಸ್ಥಾನಕ್ಕೆ ಪ್ರವೇಶಮಾಡಿ ವಂದಿಸಿ "ಮಹಾಪ್ರಭು, ಚಾಣಕ್ಯನೆಂಬ ಬ್ರಾಹ್ಮಣೋತ್ತಮರು ಉದಯಿಸಿ ಬರುತ್ತಿರುವ ಬಾಲಚಂದ್ರನನ್ನೊಡಗೂಡಿದ ಅಂಗಾರಕನಂತೆ ಮಹಾತೇಜೋವಂತನಾಗಿರುವ ರಾಜಪುತ್ರನೊಡನೆ ರಾಜ ದ್ವಾರವನ್ನಲಂಕರಿಸುತ್ತ, ಸನ್ನಿಧಿಯನ್ನು ಕಾಣಬೇಕೆಂದು ಕುತೂಹಲದಿಂದ ಕಾದಿರುವರು" ಎಂದು ಬಿನ್ನೈಸಿದನು.

ಪರ್ವತರಾಜನು ಮನಸ್ಸಿನಲ್ಲಿ ಮೊದಲು ಶಬರವರ್ಮನು ಹೇಳಿದಂತೆ ಚಾಣಕ್ಯನು ಚಂದ್ರಗುಪ್ತನೊಡನೆ ಬಂದಿರಬೇಕೆಂದು ತಿಳಿದು, ಯಥೋಚಿತ ಮರ್ಯಾದೆಯಿಂದ ಅವರನ್ನು ಕರೆತರುವುದೆಂದು ಮಂತ್ರಿಯ ಕಡೆ ನೋಡಿದನು. ಶಬರವರ್ಮನು ಎದ್ದು ಬಂದು ಚಾಣಕ್ಯಚಂದ್ರಗುಪ್ತರನ್ನು ಕಂಡು ಗೌರವ ಪೂರ್ವಕವಾಗಿ ಅವರನ್ನು ಸಭಾಮಂಟಪಕ್ಕೆ ಕರೆತಂದನು. ಪರ್ವತರಾಜನು ಸಂತೋಷದಿಂದ ಅವರನ್ನು ಸ್ವಾಗತಿಸಿ ಸುವರ್ಣಾಸನಗಳಲ್ಲಿ ಕುಳ್ಳಿರಿಸಿ ಕುಶಲ ಪ್ರಶ್ನೆ ಮಾಡಿದನು.

"ಮಹಾತ್ಮರೆ, ತಮ್ಮ ಆಗಮನದಿಂದ ನಾನು ಧನ್ಯನಾದೆನು; ತಮ್ಮ ದರ್ಶನಲಾಭದಿಂದ ನಮ್ಮ ನಾಡು ಪಾವನವಾಯಿತು. ಬ್ರಹ್ಮತೇಜೋನಿಧಿ ಗಳಾದ ತಾವು ಕುಶಲವಷ್ಟೆ ?"

"ರಾಜಾಧಿರಾಜ ಪರ್ವತೇಶ್ವರ, ನಾವು ಕ್ಷೇಮದಿಂದಿರುವೆವು. ಪ್ರಜಾ ಪರಿವಾರ ಸಮೇತನಾದ ನಿನಗೆ ಕುಶಲವೆ ?"

"ಭೂಸುರೋತ್ತಮರೆ, ನಿಮ್ಮಂಥ ಮಹಾತ್ಮರ ಆಶೀರ್ವಾದ ಬಲದಿಂದ ನಾವೆಲ್ಲರೂ ಕ್ಷೇಮಿಗಳು. ಪ್ರಕೃತ ತಾವು ಬಂದ ಕಾರ್ಯಾರ್ಥವನ್ನು ಆಜ್ಞಾಪಿಸಿದರೆ ನಾನು ಕೃತಾರ್ಥನಾಗುವೆನು."

"ಮಹಾರಾಜ, ಧರ್ಮದಿಂದ ಪ್ರಜಾಪಾಲನೆ ಮಾಡುತ್ತ ಕೀರ್ತಿವಂತ ನಾಗಿರುವ ನಿನ್ನ ವೈಭವವನ್ನು ನೋಡಲು ಇಲ್ಲಿಗೆ ಬಂದೆವು. ಇದಲ್ಲದೆ ಏಕಾಂತವಾದ ಮತ್ತೊಂದು ಕಾರ್ಯಗೌರವವೂ ಉಂಟು."

ಚಾಣಕ್ಯನು ಹೇಳಿದ ಆ ಮಾತು ಕೇಳಿ ದೊರೆಯು ಸುತ್ತಲೂ ನೋಡಲು ಆತನ ಇಂಗಿತವನ್ನರಿತ ಪರಿವಾರದವರು ದೂರ ಸರಿದರು.

"ರಾಜೇಂದ್ರ, ಜ್ಞಾತಿಮತ್ಸರದಿಂದ ನಂದರು ಮೌರ್ಯರನ್ನು ದುರ್ಮರಣಕ್ಕೆ ಗುರಿಮಾಡಿದ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಈ ಅಕೃತ್ಯ

ವನ್ನು ನೆನೆದು ನಂದರಿಗೆ ಸಮ್ಮತವಾದ ಅಮಾತ್ಯರಾಕ್ಷಸನೊಬ್ಬನ ಹೊರತು ಮಿಕ್ಕ ಮಂತ್ರಿಸೇನಾಪತಿಗಳು ಅಂತರಂಗದಲ್ಲಿ ನಂದರಿಗೆ ವಿರೋಧಿಗಳಾಗಿ ಬಹಿರಂಗದಲ್ಲಿ ಅವರಿಗೆ ಆಪ್ತರಂತೆ ಇದ್ದು ಕೊಂಡು ಚಂದ್ರಗುಪ್ತನ ಅಭ್ಯುದಯ ವನ್ನು ನಿರೀಕ್ಷಿಸುತ್ತಿದ್ದಾರೆ. ಅವರು ಚಂದ್ರಗುಪ್ತನಿಗೆ ಸಮಯದಲ್ಲಿ ಸಹಾಯಕ ರಾಗಿರುತ್ತೇವೆಂದು ಸೂಚಿಸುವುದಕ್ಕಾಗಿ ತಮ್ಮ ಹಸ್ತಾಕ್ಷರಗಳಿಂದಲೇ ಸಮ್ಮತಿ ಪತ್ರವನ್ನು ಬರೆದು ಈ ಚಂದ್ರಗುಪ್ತನಿಗೆ ಕೊಟ್ಟಿದ್ದಾರೆ. ಚಂದ್ರಗುಪ್ತನ ಭವಿಷ್ಯವು ಇನ್ನು ನಿಮ್ಮ ಕೈಯಲ್ಲಿದೆ. ನಿಮ್ಮ ಸಹಾಯವನ್ನು ಬಯಸಿ ಇಲ್ಲಿಗೆ ಬಂದಿದ್ದೇವೆ. ಇದೋ ಆ ಸಮ್ಮತಿಯ ಪತ್ರ" ಎಂದು ಚಾಣಕ್ಯನು ಹೇಳಿ ಕಾಗದವನ್ನು ಪರ್ವತರಾಜನಿಗೆ ಕೊಟ್ಟನು.

ಪರ್ವತರಾಜನು ಅದನ್ನು ನೋಡಿ ತನ್ನ ಮನಸ್ಸಿನಲ್ಲಿ ಪಾಟಲೀಪುರದಲ್ಲಿ ಮೌರ್ಯರ ಮರಣದಿಂದ ಸಾಮಾಜಿಕರಿಗೆ ಅಸಮಾಧಾನವುಂಟಾಗಿರುವಂತೆ ಅರ್ಥವಾಗುತ್ತಿದೆ. ಅವರು ಸಮಾಯೋಂತರದಲ್ಲಿ ಚಂದ್ರಗುಪ್ತನಿಗೆ ಸಹಾಯ ಕರೂ ಆಗಬಹುದು. ಇದೆಲ್ಲಾ ನಾವು ಮೊದಲು ಯೋಚಿಸಿದಂತೆಯೇ ನಡೆದಿದೆ. ಈ ಚಂದ್ರಗುಪ್ತನ ರೂಪಲಾವಣ್ಯ ಗಾಂಭೀರ್ಯಾಧಿ ಲಕ್ಷಣಗಳನ್ನು ನೋಡಿದರೆ ಈತನು ಪ್ರಭುಪದಕ್ಕೆಯೋಗ್ಯನೆಂದು ತೋರುತ್ತಿದೆ. ಅಲ್ಲದೆ ಬಾಗುರಾಯಣಾದಿ ಸೇನಾಪತಿಗಳು ನಂದರಲ್ಲಿ ಅನಾದರ ಬುದ್ಧಿಯಿಂದ — ಈ ಚಂದ್ರಗುಪ್ತನ ಅಭಿಮತವೇ ತಮ್ಮ ಅಭಿಮತವೆಂದು-ಸ್ವಹಸ್ತಾಕ್ಷರ ಸಮ್ಮತಿಯಿಂದ ಈ ಪತ್ರ ವನ್ನು ಬರೆದುಕೊಟ್ಟಿರುವುದರಿಂದ ನಂದನಿಗ್ರಹವು ಅವರಿಗೂ ಸಮ್ಮತವಾಯಿ ತೆಂದಾಯಿತು. ನಮ್ಮ ಸಹಾಯದಿಂದ ನಂದರನ್ನು ನಿಗ್ರಹಿಸಲು ಚಾಣಕ್ಯನು ಇಲ್ಲಿಗೆ ಬಂದಿದ್ದಾನೆ. ಈ ವಿಷಯಗಳನ್ನೆಲ್ಲಾ ಆಪ್ತಮಂತ್ರಿಗಳೊಡನೆ ಆಲೋಚಿಸಿ ಮುಂದಿನ ಕಾರ್ಯಕ್ಕೆ ಪ್ರವೇಶಿಸುವುದು ಯುಕ್ತವಾಗಿ ತೋರುವುದು' ಎಂದು ಯೋಚಿಸಿದನು.

ಆ ಸಮಯದಲ್ಲಿ ಅರಮನೆಯಲ್ಲಿ ಮಧ್ಯಾಹ್ನಸೂಚಕವಾದ ಮಂಗಳ ವಾದ್ಯಗಳು ಮೊಳಗಿದುವು. ಪರ್ವತರಾಜನು ಆ ವಾದ್ಯಧ್ವನಿಯು ಶುಭಸೂಚಕ ವೆಂದು ಭಾವಿಸಿ ಚಾಣಕ್ಯನೊಡನೆ "ಭೂಸುರೋತ್ತಮರೆ, ನಿಮಗೆ ಮಾಧ್ಯಾಹ್ನಿಕ ಸಮಯವು ಸನ್ನಿಹಿತವಾಯಿತು. ಬಹುದೂರದಿಂದ ಬಂದು ಮಾರ್ಗಾಯಾಸ ವನ್ನು ಹೊಂದಿರುವಿರಿ. ಈಗ ವಿಶ್ರಮಿಸಿಕೊಳ್ಳಿ ; ಆ ಬಳಿಕ ಉಳಿದ ವಿಚಾರ

ನೋಡಿಕೊಳ್ಳೋಣ" ಎಂದು ಹೇಳಿ ಆ ಪತ್ರವನ್ನು ಕುಮಾರ ಮಲಯಕೇತುವಿನ ಕೈಗೆ ಕೊಟ್ಟು ಭೋಜನಾಸಕ್ತನಾಗಿ ತೆರಳಿದನು.

ರಾಜಾಜ್ಞೆಯಂತೆ ಶಬರವರ್ಮ ಮಂತ್ರಿಯು ಚಾಣಕ್ಯ ಚಂದ್ರಗುಪ್ತರಿಗೆ ಪ್ರಮದವನದ ಅರಮನೆಯಲ್ಲಿ ಸಕಲ ರಾಜೋಪಚಾರಗಳೊಡನೆ ಬಿಡಾರವನ್ನೇರ್ಪಡಿಸಿದನು. ಅದೊಂದು ಸುಂದರವಾದ ಉದ್ಯಾನ. ಮಾವು, ತೆಂಗು, ಹಲಸು, ನೇರಿಳೆ ಮೊದಲಾದ ಫಲವೃಕ್ಷಗಳು ಸೊಂಪಾಗಿ ಬೆಳೆದಿದ್ದುವು. ಅರಳಿದ ಮಲ್ಲಿಗೆ, ಜಾಜಿ, ಸಂಪಿಗೆ, ಗುಲಾಬಿ, ಸೇವಂತಿಗೆ, ಮೊದಲಾದ ಉತ್ತಮ ಪುಷ್ಪಗಳು ನವಸೌರಭವನ್ನು ಬೀರುತ್ತಿದ್ದುವು. ಮಕರಂದಾಭಿಲಾಷೆಯಿಂದ ಬಿರಿದ ಹೂಗಳಿಗೆ ಬಂದೆರಗುತ್ತಿದ್ದ ಮಧುಕರಗಳ ಝೇಂಕಾರ ಕರ್ಣಾನಂದಕರವಾಗಿತ್ತು. ಒಂದೆಡೆ ಸಿಹಿಮಾವಿನ ತುದಿಗೊಂಬೆಯಲ್ಲಿ ಕುಳಿತು ಕೋಗಿಲೆಗಳು ತಮ್ಮ ಮಧುರಕಂಠದಿಂದ ಕೂಗುತ್ತಿದ್ದುವು. ಮತ್ತೊಂದೆಡೆ ನವಿಲುಗಳು ತಮ್ಮ ನೀಳವಾದ ಗರಿಗಳನ್ನು ಕೆದರಿ ಕೇಕೆಹಾಕುತ್ತ ನರ್ತಿಸುತ್ತಿದ್ದುವು. ಪಂಜರಗಳಲ್ಲಿದ್ದ ಪಂಚವರ್ಣದ ಗಿಳಿಗಳು ತಮ್ಮ ನಲ್ನುಡಿಗಳಿಂದ ಪ್ರೇಕ್ಷಕರಿಗೆ ಸ್ವಾಗತವನ್ನು ಬಯಸುತ್ತಿದ್ದುವು. ವಿವಿಧ ಬಗೆಯಲ್ಲಿ ಪಾತಿಗಳಲ್ಲಿ ಮತ್ತು ಕುಂಡಗಳಲ್ಲಿ ಬೆಳಸಿದ್ದ ವಿವಿಧ ವರ್ಣದ ಪತ್ರಪುಷ್ಪಗಳಿಂದ ಕೂಡಿದ್ದ ಹೂಗಿಡಗಳೂ ಅಲ್ಲಲ್ಲಿ ನಿರ್ಮಿಸಿದ್ದ ಲತಾಮಂಟಪಗಳೂ ಆ ಉಪವನಕ್ಕೆ ಒಂದು ಅಪೂರ್ವವಾದ ಶೋಭೆಯನ್ನುಂಟುಮಾಡುತ್ತಿದ್ದುವು. ಅ ಉದ್ಯಾನದ ಮಧ್ಯದಲ್ಲಿ ತಿಳಿನೀರಿನಿಂದ ಕೂಡಿದ ಚಂದ್ರಕಾಂತದ ಸೋಪಾನಗಳಿಂದೊಪ್ಪುವ ಸರೋವರವು ಶೋಭಿಸುತ್ತಿತ್ತು. ಆ ಸರಸಿಯಲ್ಲಿ ಹಂಸ ಸಮೂಹವು ನೀರಾಟದಲ್ಲಿ ಮಗ್ನವಾಗಿತ್ತು. ಬೆಳ್ದಾವರೆಗಳು ಅರಳಿ ಕಂಗೊಳಿಸುತ್ತಿದ್ದುವು. ಹೀಗೆ ನೋಡುವವರ ಕಣ್ಮನಗಳನ್ನು ಸೆಳೆಯುತ್ತಿದ್ದ ಪ್ರಮದವನದಲ್ಲಿ ವಿರಾಜಿಸುವ ರಾಜಗೃಹದಲ್ಲಿ ಚಾಣಕ್ಯ ಚಂದ್ರಗುಪ್ತರು ತಂಗಿದರು.

ಚಾಣಕ್ಯನೂ ಚಂದ್ರಗುಪ್ತನೂ ಅಲ್ಲಿಯ ಸರೋವರದಲ್ಲಿ ಸ್ನಾನಮಾಡಿ ಅಲ್ಲಿದ್ದ ಫಲಪುಷ್ಪಗಳನ್ನು ದೇವರಿಗೆ ಸಮರ್ಪಿಸಿ ಉಚಿತವಾದ ಆಹಾರವನ್ನು ಸೇವಿಸಿ ವಿಶ್ರಾಂತಿ ಪಡೆದರು.

ಮಾರನೆಯ ದಿನ ಪರ್ವತರಾಜನು ತನ್ನ ಆಪ್ತ ಮಂತ್ರಿಗಳಲ್ಲಿ ಪರ್ಯಾಲೋಚಿಸಿ ಆ ಬಳಿಕ ಚಾಣಕ್ಯ ಚಂದ್ರಗುಪ್ತರನ್ನು ಗೌರವಪೂರ್ವಕವಾಗಿ

ಆಸ್ಥಾನಕ್ಕೆ ಬರಮಾಡಿಕೊಂಡನು. ಅವರಿಗಾಗಿ ಸಿದ್ಧಪಡಿಸಿದ್ದ ಉತ್ತಮಾಸನಗಳಲ್ಲಿ ಅವರು ಮಂಡಿಸಿದ ನಂತರ ಪರಸ್ಪರ ಸಂಭಾಷಣೆ ನಡೆಸಿದರು.

"ಆಚಾರ್ಯರೆ, ತಾವು ಇಲ್ಲಿಗೆ ಬಂದುದು ಒಳ್ಳೆಯದೇ ಆಯಿತು. ಈ ಚಂದ್ರಗುಪ್ತನು ತಮ್ಮನ್ನಾಶ್ರಯಿಸಿದುದರಿಂದ ಈತನ ಕಾರ್ಯ ಸಿದ್ಧಿಸುವುದರಲ್ಲಿ ಸಂಶಯವಿಲ್ಲ. ಈತನು ತಮ್ಮಲ್ಲಿಗೆ ಬಂದು ಎಷ್ಟು ದಿನಗಳಾದುವು ? ನಾನು ತಿಳಿಯಬಹುದಾದರೆ........"

"ಮಹಾರಾಜ, ಚಂದ್ರಗುಪ್ತನು ನನ್ನ ಬಳಿಗೆ ಬಂದು ಹೆಚ್ಚು ದಿನವಾಗಲಿಲ್ಲ. ಅದಕ್ಕಿಂತ ಹೆಚ್ಚಾಗಿ ನಂದರು ನನಗೆ ಮಾಡಿದ ಅಪಮಾನಕ್ಕಾಗಿ ಅವರ ಮೇಲೆ ನನ್ನ ದ್ವೇಷವು ಕ್ಷಣಕ್ಷಣಕ್ಕೆ ವೃದ್ಧಿಗೊಳ್ಳುತ್ತಿದೆ. ಮೌರ್ಯರ ದುರಂತ, ಚಂದ್ರಗುಪ್ತನಿಗೆ ಒದಗಿದ ವಿಪತ್ತು, ನನಗಾದ ಅಪಮಾನ ಇವೆಲ್ಲ ಕಾರಣಗಳಿಂದ ನನ್ನ ಮನಸ್ಸು ಕಲಕಿ ನಂದರನ್ನು ನಿಗ್ರಹಿಸಿ ಚಂದ್ರಗುಪ್ತನನ್ನು ಗೌಡರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಬೇಕೆಂದು ಪ್ರತಿಜ್ಞೆಮಾಡಿ ನಿನ್ನ ಸಹಾಯಕ್ಕಾಗಿ ಬಂದೆನು. ನಾನು ಯೋಚಿಸಿದ ಕಾರ್ಯಕ್ಕೆ ಸಹಾಯಕವಾಗಿ ಪಾಟಲೀಪುರದ ಬಳಿ ಬಂದು ನಿಂತರೆ ಸಾಕು. ಮುಂದಿನ ಕೆಲಸ ಉಪಾಯಾಂತರಗಳಿಂದ ನಾನು ಸಾಧಿಸುವೆನು. ಯುದ್ಧವಾದಲ್ಲಿ ಸೇನಾಹಾನಿಯಾಗುವುದೆಂದು ನೀನು ಯೋಚಿಸಬೇಕಾಗಿಲ್ಲ."

"ತಪೋಧನರೆ, ಗೂಢಚಾರರಿಂದ ಪಾಟಲೀಪುರದ ಸಂಗತಿಗಳನ್ನು ನಾವು ತಿಳಿದಿದ್ದೇವೆ. ನೀವು ಹೇಳಿದುದೆಲ್ಲವೂ ವಿಹಿತವೇ ಆಗಿದೆ. ದುಷ್ಟಶಿಕ್ಷಣ ಶಿಷ್ಟರಕ್ಷಣವು ಕ್ಷತ್ರಿಯನ ಧರ್ಮ. ಆದರೆ ಪ್ರಕೃತದಲ್ಲಿ ನಿಮ್ಮ ಕಾರ್ಯಕ್ಕೆ ನೆರವಾಗಲು ನನಗೆ ಅವಕಾಶವಿಲ್ಲದಿರುವುದಕ್ಕಾಗಿ ಚಿಂತಿಸಬೇಕಾಗಿದೆ. ನಮ್ಮಿಂದ ಹಿಂದೆ ಪರಾಜಿತನಾಗಿದ್ದ ಲಂಪಾಕ ದೇಶಾಧಿಪತಿಯು ಈಗ ಅನ್ಯನೃಪರ ಸಹಾಯ ಪಡೆದು ನಮ್ಮಲ್ಲಿ ಪೂರ್ವವಿರೋಧವನ್ನು ನೆನೆದು ನಮ್ಮ ಮೇಲೆ ದಂಡೆತ್ತಿ ಬಂದಿದ್ದಾನೆ. ಈಗ ಒದಗಿರುವ ಯುದ್ಧವನ್ನು ಮೊದಲು ಮುಗಿಸಿಕೊಂಡು ಬಳಿಕ ನಿಮ್ಮ ಕಾರ್ಯಕ್ಕೆ ಅನುಕೂಲನಾಗುವೆನು. ಅಲ್ಲಿಯವರೆಗೆ ತಾವು ಕೃಪೆಯಿಟ್ಟು ಇಲ್ಲಿಯೇ ಇರಬೇಕೆಂದು ಪ್ರಾರ್ಥಿಸುತ್ತೇನೆ."

"ಪರ್ವತರಾಜ, ನೀನು ಹೇಳಿದ ಮಾತನ್ನು ಯೋಚಿಸಿ ನೋಡಿದರೆ ಲಂಪಾಕಾಧಿಪತಿಯು ಅಷ್ಟೇನೂ ಬಲಾಢ್ಯನಂತೆ ತೋರುತ್ತಿಲ್ಲ. ದುರ್ಬಲನಾದ

ಆತನನ್ನು ಉಪಾಯಾಂತರದಿಂದ ಸುಲಭವಾಗಿ ಪರಾಜಿತನನ್ನಾಗಿ ಮಾಡಬಹುದು. ಆತನಿಗೆ ವಿರೋಧಿಗಳು ಯಾರಾದರೂ ಇರುವರೆ ?"

"ಚಾಣಕ್ಯರೆ, ಲಂಪಾಕಾಧಿಪತಿಯು ಅಂಥ ಶೂರನಲ್ಲವೆಂಬುದು ಸಿದ್ಧವಾಗಿಯೇ ಇದೆ. ಆದರೂ ಮೊದಲು ಅವನ ಸೊಕ್ಕನ್ನು ಅಡಗಿಸಬೇಡವೇ? ಅವನಿಗೂ ಕಾಮರೂಪದೇಶಾಧಿಪತಿಗೂ ದ್ವೇಷವುಂಟೆಂದು ಕೇಳಿದ್ದೇನೆ."

"ಹಾಗಾದರೆ ನೀನಿನ್ನು ಚಿಂತಿಸಬೇಕಾಗಿಲ್ಲ. ಆ ಲಂಪಾಕಾಧಿಪತಿಗೆ ತಕ್ಕ ಶಾಸ್ತಿಮಾಡುವ ಭಾರ ನನಗಿರಲಿ. ಬುದ್ಧಿವಂತನಾದ ನಿನ್ನ ನಿಯೋಗಿಯೊಬ್ಬನನ್ನು ನನ್ನ ಬಳಿಗೆ ಕಳುಹಿಸಿಕೊಟ್ಟರೆ ಉಳಿದುದು ಕಾರ್ಯಾಂತರದಲ್ಲಿ ನಿನಗೇ ತಿಳಿಯುವುದು."

ಬಳಿಕ ಚಾಣಕ್ಯನ ಬುದ್ಧಿವಂತಿಕೆಯನ್ನು ನೋಡಬೇಕೆಂದು ಪರ್ವತರಾಜನು ಕಮಲಾಪೀಡನೆಂಬ ತನ್ನ ಆಪ್ತ ನಿಯೋಗಿಯನ್ನು ಚಾಣಕ್ಯನ ಬಳಿಗೆ ಕಳುಹಿಸಿದನು. ಚಾಣಕ್ಯನುಪ್ರಕೃತೋಚಿತವಾಗಿ ಎರಡು ಪತ್ರಗಳನ್ನು ಬರೆದು ಅವುಗಳಿಗೆ ರಾಜಮುದ್ರೆಯನ್ನೊತ್ತಿಸಿ ಆ ನಿಯೋಗಿಗೆ ಹೇಳಬೇಕಾದ ಕಾರ್ಯಕೌಶಲ್ಯವನ್ನು ತಿಳಿಸಿ, ಅವನನ್ನು ಕಾಮರೂಪದೇಶದ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಕಳುಹಿಸಿದನು.

ಕಮಲಾಪೀಡನು ಪತ್ರಗಳೊಡನೆ ಪ್ರಾಗ್ಜ್ಯೋತಿಷಪುರಕ್ಕೆ ಪ್ರಯಾಣ ಮಾಡಿದನು. ಅಲ್ಲಿ ತನಗೆ ಆಪ್ತನಾದ ದೂತನ ಹತ್ತಿರ ತನ್ನ ಹೆಸರಿಗೆ ಬರೆದಿರುವ ರಾಜನ ನಿರೂಪವನ್ನು ಕೊಟ್ಟು ಅವನು ಯಾವ ರೀತಿ ಮಾಡಬೇಕೆಂಬುದನ್ನು ತಿಳಿಸಿ ಆ ನಗರದ ಉದ್ಯಾನದಲ್ಲಿ ತಾನು ತಂಗಿದ್ದನು. ಆ ದೂತನು ಕಮಲಾಪೀಡನು ಹೇಳಿದ್ದಂತೆ ನಿಯೋಗಿಯನ್ನು ಹುಡುಕುತ್ತಾ ಚಾವಡಿಯ ಬಳಿ ನಿಂತು ಎಲ್ಲರೂ ಕೇಳುವಂತೆ "ಅಯ್ಯಾ ನಾಗರಿಕರಿರಾ, ಪರ್ವತರಾಜನ ನಿಯೋಗಿಯು ಈ ನಗರಕ್ಕೆ ಬಂದಿರುವನು. ಅಗತ್ಯವಾಗಿ ಅವನನ್ನು ನೋಡಬೇಕಾದ ರಾಜಕಾರ್ಯವುಂಟು. ಅವನಿರುವ ಸ್ಥಳ ತಿಳಿಸಿದರೆ ನಿಮಗೆ ಪುಣ್ಯ ಬರುವುದು" ಎಂದು ಹೇಳಿದನು.

ಅಲ್ಲಿದ್ದ ಬೇಹುಕಾರರು ಇದರಲ್ಲಿ ಏನೋರಹಸ್ಯರಾಜಕಾರ್ಯವಿರಬೇಕೆಂದು ಅವನನ್ನು ರಾಜಸನ್ನಿಧಿಗೆ ಕರೆದೊಯ್ದು ಅವನು ಹೇಳಿದ ವಿಚಾರವನ್ನು ಅರಿಕೆ ಮಾಡಿ ಅವನ ಬಳಿ ಇದ್ದ ಮೊಹರಿನ ಕಾಗದವನ್ನು ದೊರೆಗೆ ಒಪ್ಪಿಸಿದರು.

ದೊರೆಯು ಆ ಕಾಗದವನ್ನು ತನ್ನ ಬಳಿ ಇಟ್ಟುಕೊಂಡು ಆ ದೂತನನ್ನು ನಿರ್ಭಂಧದಲ್ಲಿರಿಸಿ, ನಿಯೋಗಿಯನ್ನು ಎಲ್ಲಿದ್ದರೂ ಹುಡುಕಿ ರಾಜಸಭೆಗೆ ಕರೆತರುವಂತೆ ದೂತರಿಗೆ ಆಜ್ಞೆಮಾಡಿದನು. ರಾಜಭಟರು ಹುಡುಕುತ್ತಾ ಬಂದು ಉದ್ಯಾನದಲ್ಲಿದ್ದ ನಿಯೋಗಿ ಕಮಲಾಪೀಡನನ್ನು ರಾಜಾಸ್ಥಾನಕ್ಕೆ ಕರೆತಂದರು. ಕಮಲಾಪೀಡನು ಪದ್ಧತಿಯಂತೆ ರಾಜಮರ್ಯಾದೆಯನ್ನು ಸಲ್ಲಿಸಿ ತಾನು ತಂದ ನಿರೂಪವನ್ನು ರಾಜನಿಗೆ ಅರ್ಪಿಸಿದನು.

"ಸ್ವಸ್ತಿಶ್ರೀ ಪರಮ ಮಿತ್ರರಾದ ಕಾಮರೂಪದೇಶಾಧಿಪತಿ ಸೂರ್ಯವರ್ಮರಿಗೆ ಪರ್ವತೇಶ್ವರನು ಮಾಡುವ ವಿಜ್ಞಾಪನೆ ಏನೆಂದರೆ-ನನ್ನ ಪುತ್ರ ಮಲಯಕೇತುವಿಗೆ ತಮ್ಮ ಶ್ರೀಮಂತ ಪುತ್ರಿಯನ್ನು ತಂದುಕೊಂಡು ನಿಮ್ಮ ಬಂಧುತ್ವವನ್ನು ಬೆಳೆಸಬೇಕೆಂದು ಈ ನಿಯೋಗಿಯನ್ನು ನಿಮ್ಮ ಬಳಿಗೆ ಕಳುಹಿಸಿರುವೆನು. ಇದಕ್ಕೆ ನೀವು ಸಮ್ಮತಿಸಿ ಕುಮಾರಿಯ ಜಾತಕವನ್ನು ನಿಮ್ಮ ಪುರೋಹಿತರ ಮೂಲಕ ಕಳುಹಿಸಿಕೊಟ್ಟರೆ ನಮಗೆ ಬಹಳ ಸಂತೋಷವಾಗುವುದು" ಇತ್ಯಾದಿ ಒಕ್ಕಣೆಯಿಂದ ಕೂಡಿದ್ದ ಪತ್ರವನ್ನು ನೋಡಿ ಸೂರ್ಯವರ್ಮನು ಆ ಸಂಬಂಧಕ್ಕೆ ಸಮ್ಮತಿಸಿ ಹಿಗ್ಗಿದನು. ಅನಂತರ ಆ ನಿಯೋಗಿಯನ್ನು ಗೌರವಿಸಿ 'ನಿಮ್ಮ ರಾಜರ ಮತ್ತೊಂದು ಪತ್ರವು ದೂತನ ಮೂಲಕ ನನ್ನ ಕೈಸೇರಿತು' ಎಂದು ಹೇಳಿ ಅದನ್ನು ಅವನಿಗೆ ಕೊಟ್ಟನು.

ಕಮಲಾಪೀಡನು ಆ ಪತ್ರವನ್ನು ಓದಿಕೊಂಡು ಚಿಂತಾಕ್ರಾಂತನಾದಂತೆ ವರ್ತಿಸಿದನು. ವಿಚಾರವೇನೋ ತಿಳಿಯಬೇಕೆಂದು ಸೂರ್ಯವರ್ಮನು ಅದನ್ನು ಓದಿಸಿದನು. "ನಿಯೋಗಿ ಕಮಲಾಪೀಡನಿಗೆ, ನೀನು ಕನ್ಯಾರ್ಥಿಯಾಗಿ ಹೋಗಿರುವುದು ಸರಿಯಷ್ಟೆ ? ಅಲ್ಲಿ ನಿನಗೆ ಇನ್ನೂ ರಾಜದರ್ಶನವು ಆಗಿದೆಯೋ ಇಲ್ಲವೋ ತಿಳಿಯದು. ಒಂದು ವಿಶೇಷ ವಿಷಯ ನಿನಗೆ ಅತ್ಯಗತ್ಯವಾಗಿ ತಿಳಿಸಬೇಕಾಗಿ ಬಂದುದರಿಂದ ದೂತನ ಮೂಲಕ ಕಾಗದ ಕಳುಹಿಸಿದೆ. ಈಚೆಗೆ ಲಂಪಾಕಾಧಿಪತಿಯು ರಾಜಪ್ರಶಂಸಾ ಸಭೆ ನೆರೆದಿದ್ದಾಗ ಕಾಮರೂಪದೇಶಾಧಿಪತಿಯ ವಂಶದಲ್ಲಿ ಏನೋ ದೋಷವಿದೆಯೆಂದು ಅವರನ್ನು ಹೀನವಾಗಿ ಭಾವಿಸಿದನಂತೆ. ಆಪ್ತಜನರಿಂದ ಈ ಸಂಗತಿ ನಮಗೆ ತಿಳಿಯಿತು. ಸಂಬಂಧ ಬೆಳೆಸುವುದಕ್ಕೆ ಮುಂಚೆ ಸೂರ್ಯವರ್ಮರ ಕುಲಶೀಲಗಳ ವಿಚಾರ ಸರಿಯಾಗಿ ತಿಳಿದು ನಿನಗೆ ಸಮಾಧಾನವಾದರೆ ನಿಶ್ಚಯಮಾಡಿಕೊಂಡು ಬರುವುದು."

ಆ ಕಾಗದದ ವಿಷಯವನ್ನು ಕೇಳಿದ ಸೂರ್ಯವರ್ಮನ ಕಣ್ಣುಗಳು ಕೆಂಪಾದವು ; ಹುಬ್ಬು ಗಂಟಿಕ್ಕಿತು, ಹಲ್ಲು ಕಟಗುಟ್ಟಿದುವು. ಆತನು ಅತ್ಯಧಿಕ ರೋಷದಿಂದ 'ಕ್ಷತ್ರಿಯಾಧಮನಾದ ಲಂಪಾಕಾಧಿಪನು ನಮ್ಮ ವಂಶದ ವಿಚಾರ ದಲ್ಲಿ ಆಡಿದ ಕೆಟ್ಟನುಡಿಗೆ ಪ್ರತೀಕಾರವಾಗಿ ನಾನು ಆತನ ರುಂಡವನ್ನು ಮುಂಡ ದಿಂದ ಬೇರ್ಪಡಿಸದೇ ಹೋದರೆ ಪ್ರಖ್ಯಾತನಾದ ನರಕಾಸುರನ ವಂಶದಲ್ಲಿಹುಟ್ಟಿ ದವನೇ ಅಲ್ಲ. ನಮ್ಮ ಸೇನೆ ಕೂಡಲೆ ಲಂಪಾಕದೇಶಕ್ಕೆ ಯುದ್ಧಕ್ಕೆ ಹೊರಡಲಿ' ಎಂದು ಆಜ್ಞಾಪಿಸಿದನು. ಉಚಿತ ಮರ್ಯಾದೆಯೊಡನೆ ಪರ್ವತರಾಜನಿಗೆ ಪತ್ರವನ್ನು ಬರೆದು ನಿಯೋಗಿಯ ವಶಕ್ಕೆಕೊಟ್ಟನು. ಕಮಲಾಪೀಡನು ಪರ್ವತ ರಾಜ್ಯಕ್ಕೆ ಹಿಂದಿರುಗಿ ಬಂದು ಅಲ್ಲಿ ನಡೆದ ಸಂಗತಿಯನ್ನು ಪರ್ವತರಾಜನಿಗೆ ವಿಜ್ಞಾಪಿಸಿಕೊಂಡನು.

ಪರ್ವತರಾಜನು ಹರ್ಷಚಿತ್ತನಾಗಿ ಚಾಣಕ್ಯನನ್ನು ಬರಮಾಡಿಕೊಂಡು "ನೀವು ಮಾಡಿದ ಉಪಾಯದಿಂದ ನಿರಾಯಾಸವಾಗಿ ಕಾಮರೂಪದೇಶಾಧಿ ಪತಿಯ ಮೂಲಕ ಲಂಪಾಕಾಧಿಪತಿಯ ನಿಗ್ರಹವು ನಡೆದಂತಾಯ್ತು. ಲೋಕ ದಲ್ಲಿ ಉಪಾಯಚತುರರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಇನ್ನು ನಿಮ್ಮ ಕಾರ್ಯಕ್ಕೆ ನಾನು ಸಿದ್ಧನಿರುವೆನು. ಈ ಶುಭವಾರ್ತೆಯನ್ನು ನಿಮಗೆ ತಿಳಿಸಬೇಕೆಂದು ನಿಮ್ಮನ್ನಿಲ್ಲಿಗೆ ಬರಮಾಡಿಕೊಂಡೆನು. ಸಂಧ್ಯಾಕಾಲವು ಸನ್ನಿಹಿತವಾದ್ದರಿಂದ ತಾವು ಬಿಡಾರಕ್ಕೆ ತೆರಳಿ ವಿಶ್ರಾಂತಿ ಪಡೆಯಬಹುದು. ನಾಳೆಯೇ ನಮ್ಮ ಸೇನೆ ಪಾಟಲೀಪುರಾಭಿಮುಖವಾಗಿ ತೆರಳುವುದು" ಎಂದು ಗಂಧಪುಷ್ಪ ತಾಂಬೂಲಗಳಿಂದ ಮರ್ಯಾದಿಸಿ ಚಾಣಕ್ಯನನ್ನು ಬಿಡಾರಕ್ಕೆ ಕಳುಹಿಸಿದನು. ಚಾಣಕ್ಯನು ಬಿಡಾರವನ್ನುತಲುಪಿ ಪರ್ವತರಾಜನ ಸಹಾಯಕ್ಕೆ ಪ್ರತಿಫಲವಾಗಿ ಅವನಿಗೆ ಅರ್ಧರಾಜ್ಯ ಕೊಡುವುದಾಗಿ ಚಂದ್ರಗುಪ್ತನಿಂದ ಕಾಗದವನ್ನು ಬರೆಸಿ ಆ ರಾತ್ರಿಯೇ ತಮ್ಮನ್ನು ನೋಡಲು ಬಂದ ರಾಜಕುಮಾರ ಮಲಯಕೇತುವಿನ ಮೂಲಕ ಪರ್ವತರಾಜನಿಗೆ ಕಳುಹಿಸಿಕೊಟ್ಟನು. ಚಾಣ ಕ್ಯನ ಮುಂದಾಲೋಚನೆಯನ್ನು ಪ್ರಶಂಸಿಸಿ ಪರ್ವತರಾಜನು ಸಂತೋಷದಿಂದ ಆ ಪತ್ರವನ್ನು ಸ್ವೀಕರಿಸಿದನು.

ಬಳಿಕ ಪರ್ವತರಾಜನು ಚಾಣಕ್ಯನು ಪ್ರಯತ್ನಿಸಿದ ಕಾರ್ಯಗಳೆಲ್ಲ ನಿರ್ವಿಘ್ನ

ವಾಗಿ ನಡೆಯುವುದರಲ್ಲಿ ಸಂಶಯವಿಲ್ಲೆಂದು ಭಾವಿಸಿ ತಾನೇ ಸೇನಾಪರಿವೃತನಾಗಿ ನಂದರ ಮೇಲೆ ಯುದ್ಧಕ್ಕೆ ಹೊರಡಲು ನಿಶ್ಚೈಸಿ, ಸರ್ವಾಧಿಪತ್ಯವನ್ನು ಮಾಡುತ್ತಿದ್ದ ವಿರೋಚನನೆಂಬ ತಮ್ಮನನ್ನು ಬರಮಾಡಿಕೊಂಡು ತಾನೇ ಯುದ್ಧಕ್ಕೆ ಹೊರಡುವ ವಿಚಾರ ತಿಳಿಸಿದನು. 'ಕಿರಾತರಾಜನಾದ ಮಾತಂಗನು ಸೇನಾಸಮೇತನಾಗಿ ಮುಂದೆ ತೆರಳಲಿ. ಕುದ್ದಾಲನೂ ದಾಶನೂ ಮಾರ್ಗಗಳನ್ನು ಸರಿಪಡಿಸುತ್ತ ಸೈನ್ಯಕ್ಕೆ ಬೇಕಾಗುವ ಸೌಕರ್ಯಗಳನ್ನು ಒದಗಿಸುವ ಕಾರ್ಯದಲ್ಲಿ ನಿರತರಾಗಿ ಮುಂದೆ ಮುಂದೆ ನಡೆಯುತ್ತಿರಲಿ. ಸೇನಾಪತಿ ಶೇಖರನು ಗೂಢಚಾರರಿಂದ ಶತ್ರುಗಳ ರಹಸ್ಯವನ್ನು ಭೇದಿಸುತ್ತ ಸೈನ್ಯವನ್ನು ಪ್ರೋತ್ಸಾಹಿಸುತ್ತ ನಮ್ಮೊಡನೆ ಬರಲಿ. ಗಾಂಧಾರ, ಹೂಣ ದೇಶಾಧಿಪತಿಗಳು ಚಂದ್ರಗುಪ್ತನ ಅಂಗರಕ್ಷಕರಾಗಿ ಇರಲಿ. ಕುಲೂತಪತಿ ಚಿತ್ರವರ್ಮನೂ ಮಲಯಪತಿ ಸಿಂಹನಾದನೂ ಮಲಯಕೇತುವಿನ ಸಂಗಡ ತೆರಳಲಿ. ಸೋದರಮಾವನಾದ ಅಂಗಾರವರ್ಮನು ನಮ್ಮ ಸೇನೆಯಲ್ಲಿ ಅರ್ಧವನ್ನು ನಿಲ್ಲಿಸಿಕೊಂಡು ಉಲೂಕ ಮಂತ್ರಿಯೊಡನೆ ಪುರರಕ್ಷಣೆಗಾಗಿ ಇಲ್ಲಿಯೇ ಇರಲಿ' ಎಂದು ಆಜ್ಞಾಪಿಸಿದನು.

ವಿರೋಚನನು ರಾಜಾಜ್ಞೆಯಂತೆ ಸೇನಾಪತಿಗಳಿಗೂ ಸಾಮಂತ ಅರಸರಿಗೂ ಯುಕ್ತವಾದ ಕೆಲಸವನ್ನು ನೇಮಿಸಲು ಅವರೆಲ್ಲರೂ ತಮ್ಮ ತಮ್ಮ ಸೇನೆಗಳೊಡನೆ ಪ್ರಯಾಣ ಸನ್ನದ್ಧರಾದರು.

ನವಪುಷ್ಪಸೌರಭವನ್ನು ಹೊತ್ತ ಉಷಃಕಾಲದ ಮಂದಮಾರುತವು ಚಾಣಕ್ಯಚಂದ್ರಗುಪ್ತರನ್ನು ಎಚ್ಚರಿಸಿತು. ಚಂದ್ರಗುಪ್ತನ ಶುಭೋದಯವನ್ನು ಕೀರ್ತಿಸುವಂತೆ ಹಕ್ಕಿಗಳು ಮಧುರವಾಗಿ ಹಾಡಿದುವು. ಅಂತರಿಕ್ಷದಿಂದ ಪುಷ್ಪವೃಷ್ಟಿಯಾದಂತೆ ಪಾರಿಜಾತವೃಕ್ಷಗಳಿಂದ ಪುಷ್ಪಗಳುದುರಿದುವು. ಅರುಣೋದಯದ ಕೆಂಬೆಳಕನ್ನು ಕಂಡ ತಿಳಿಗೊಳದ ಬೆಳ್ದಾವರೆಗಳು ವಿಕಸಿತವಾದುವು. ಕಮಲಬಾಂಧವನ ಅರುಣ ಕಿರಣಗಳು ಸುತ್ತಲೂ ಪ್ರಸರಿಸಿ ಪ್ರಕೃತಿಯನ್ನೇ ಚೈತನ್ಯಮಯವಾಗಿ ಮಾಡಿದುವು. ಚಾಣಕ್ಯಚಂದ್ರಗುಪ್ತರು ಎದ್ದು ತಮ್ಮ ನಿತ್ಯವಿಧಿಗಳನ್ನು ಮುಗಿಸಿ ವಿಜಯಪ್ರಯಾಣಕ್ಕೆ ಸಿದ್ಧರಾದರು. ಆಗ ಶುಭಸೂಚಕವಾಗಿ ಚಂದ್ರಗುಪ್ತನ ಬಲಗಣ್ಣೂ ಬಲದೋಳೂ ಅದುರಿದುವು. ಅವನು ತನ್ನ ಇಷ್ಟದೇವತೆಯನ್ನು ಮನದಲ್ಲಿ ಸ್ಮರಿಸಿ, ಚಾಣಕ್ಯನ ಪಾದಗಳಿಗೆರಗಿ ಆಶೀರ್ವಾದವನ್ನು ಪಡೆದನು.

ಪರ್ವತರಾಜನೂ ಅಲಂಕೃತನಾಗಿ ತನುಜಾನುಜರೊಡನೆ ಸಾಮಂತ ದೇಶಾಧಿಪತಿಗಳಿಂದ ಪರಿವೃತನಾಗಿ ವಂದಿಗಳು ಜಯಜಯವೆಂದು ಹೊಗಳುತ್ತಿರಲು ಅಲಂಕೃತವಾದ ಗಜಾರೋಹಣ ಮಾಡಿದನು. ರಾಜನ ಇಷ್ಟಾನುಸಾರ ಚಾಣಕ್ಯನು ಶ್ರೇಷ್ಠವಾದ ಪಾಲಕಿಯಲ್ಲಿ ಕುಳಿತನು. ಚಂದ್ರಗುಪ್ತನೂ ಮಲಯಕೇತುವೂ ತಮಗಾಗಿ ಸಿದ್ಧಪಡಿಸಿದ ಆನೆಗಳ ಮೇಲೆ ಮುಂಡಿಸಿದರು. ದಿಗ್ವಿಜಯ ಪ್ರಯಾಣಸೂಚಕ ವಾದ್ಯಗಳು ಮೊಳಗಿದುವು.

ಭೋರ್ಗರೆವ ವಾದ್ಯಧ್ವನಿಗೆ ದಿಶಾಮಂಡಲವೂ ಮುಂದುವರಿವ ಅಸಂಖ್ಯಾತ ಚತುರಂಗ ಸೈನ್ಯಕ್ಕೆ ಭೂಮಂಡಲವೂ ಹಾರಾಡುತ್ತಿರುವ ಧ್ವಜ ಪತಾಕೆಗಳಿಗೆ ನಭೋಮಂಡಲವೂ ಸಾಲದೆಂಬಂತಿರಲು ಪರ್ವತೇಶ್ವರನ ಸೇನಾವಾಹಿನಿಯು ಶುಭಲಗ್ನದಲ್ಲಿ ಗೌಡರಾಜ್ಯಾಭಿಮುಖವಾಗಿ ತೆರಳಿತು. ಪ್ರಯಾಣ ಪ್ರಾರಂಭದಲ್ಲಿ ಶುಭಶಕುನಗಳನ್ನು ಕಂಡು ಚಾಣಕ್ಯನು ಆನಂದಭರಿತನಾದನು.

## ಅಭ್ಯಾಸ

ಆಯಾ ವಿಷಯಕ್ಕೆ ತಕ್ಕಂತೆ ಕೊಟ್ಟಿರುವ ವಿಷಯ ವಿಭಾಗದ ಹೆಗ್ಗುರುತುಗಳನ್ನು ಅನುಸರಿಸಿ ಉತ್ತಮ ಪ್ರಬಂಧಗಳನ್ನು ಬರೆಯಿರಿ.

೧. **ಚಾಣಕ್ಯ ಪ್ರತಿಜ್ಞೆ**

1. ಚಾಣಕ್ಯನ ದರ್ಶನ ಲಾಭ 2. ಚಂದ್ರಗುಪ್ತನ ಸಂತಾಪ. 3. ನಂದರ ದುರ್ವರ್ತನೆ. 4. ಮಹಾಪ್ರತಿಜ್ಞೆ. 5. ಅಭಯ ಪ್ರಧಾನ.

೨. **ಕಾರ್ಯಸಾಧನೆಯ ಪಥದಲ್ಲಿ**

1. ನಂದರ ಶತ್ರು–ಮಿತ್ರ ವರ್ಗ. 2. ಸಮ್ಮತಿಯ ಪತ್ರ. 3. ಇಂದುಶರ್ಮನ ಸಹಾಯ. 4. ಪರ್ವತರಾಜ್ಯಕ್ಕೆ ಪ್ರಯಾಣ.

೩. **ವಿಜಯ ಪ್ರಯಾಣ**

1. ಪರ್ವತೇಶ್ವರನಿಂದ ಸಹಾಯಾಪೇಕ್ಷೆ. 2. ಲಂಪಾಕಾಧಿಪತಿಯ ನಿಗ್ರಹ. 3. ಪರ್ವತೇಶ್ವರನ ಒಪ್ಪಿಗೆ. 4. ದಿಗ್ವಿಜಯ ಪ್ರಯಾಣ.

'ಯುದ್ಧದಿಂದಾಗುವ ದುಷ್ಪರಿಣಾಮಗಳು' ಎಂಬ ವಿಷಯವಾಗಿ ನೀವೇ ವಿಷಯ ವಿಭಾಗಮಾಡಿಕೊಂಡು ಪ್ರಬಂಧ ಬರೆಯಿರಿ.

# ಪ್ರಕರಣ ೩

[ಯುದ್ಧಸಿದ್ಧತೆ. ಭೇದೋಪಾಯ ಭಂಗ. ಕಪಟೋಪಾಯ. ಯುದ್ಧಭೂಮಿಯಲ್ಲಿ. ವಿಧಿವಿಲಾಸ.]

ಕೃಷ್ಣಪಕ್ಷದ ಸಂಜೆಗತ್ತಲು ಭೂವ್ಯಾಕಾಶಗಳನ್ನು ಆವರಿಸುತ್ತಿತ್ತು. ಮೃಗಯಾ ವಿಹಾರಕ್ಕಾಗಿ ತೆರಳಿದ್ದ ನವನಂದರು ವೇಗವಾಗಿ ಕುದುರೆಗಳನ್ನು ಓಡಿಸುತ್ತ ನಗರವನ್ನು ಸಮೀಪಿಸಿದ್ದರು. ಕತ್ತಲು ಕ್ಷಣಕ್ಷಣಕ್ಕೆ ಹೆಚ್ಚುತ್ತಿದ್ದುದರಿಂದ ಸರಿಯಾಗಿ ದಾರಿಕಾಣದೆ ಕುದುರೆಗಳು ಮುಗ್ಗುರಿಸುತ್ತಿದ್ದುವು. ಇದ್ದಕ್ಕಿದ್ದಂತೆ ಬಿರುಗಾಳಿ ಬೀಸತೊಡಗಿತು; ಕೆಂದೂಳೆದ್ದಿತು. ನಂದರು ದಿಕ್ಕು ಕಾಣದವರಾಗಿ ತಾವು ಹತ್ತಿದ್ದ ದಿವ್ಯಾಶ್ವಗಳಿಂದಿಳಿದು ಬಳಿಯಲ್ಲಿದ್ದ ಭೈರವನ ದೇವಾಲಯವನ್ನು ಹೊಕ್ಕರು. ಸಂಧ್ಯಾಪೂಜೆಗೆಂದು ಬಂದಿದ್ದ ದೇಗುಲಿಗನು ರಾಜಪುತ್ರರು ಬಂದುದನ್ನು ಕಂಡು ಬಹು ಸಂಭ್ರಮದಿಂದ ದೇವತಾರ್ಚನೆಯನ್ನು ಮಾಡಲುಪಕ್ರಮಿಸಿದನು. ನಂದರೂ ಭಕ್ತಿಯಿಂದ ಕೈಜೋಡಿಸಿ ನಿಂತಿದ್ದರು. ಅರ್ಚಕನು ದೇವರಿಗೆ ತುಪ್ಪದ ಸೊಡರಿನ ಮಂಗಳಾರತಿಯನ್ನೆತ್ತಿ ನಂದರ ಕಡೆಗೆ ಹಿಡಿಯುವಾಗ ಕೈತಪ್ಪಿ ತಟ್ಟೆಯು ಕೆಳಗೆ ಬಿದ್ದು ದೀಪ ಆರಿ ಹೋಯಿತು. ನಂದರು ಅದರಿಂದ ಬೇಸರಹೊಂದಿ ತೀರ್ಥಪ್ರಸಾದಗಳನ್ನು ಸ್ವೀಕರಿಸದೆಯೇ ದೇಗುಲದಿಂದ ಹೊರಗೆ ಬಂದರು. ಕತ್ತಲು ಕವಿದಿತ್ತು. ದೂರದಿಂದ ನರಿಗಳ ಕೂಗು ಕೇಳಿಬರುತ್ತಿತ್ತು. ಗೂಗೆಗಳ ಕರ್ಕಶ ಧ್ವನಿ ಒಮ್ಮೊಮ್ಮೆ ಕಿವಿಗೆ ಬೀಳುತ್ತಿತ್ತು. ನಂದರು ಮನಸ್ಸಿನಲ್ಲಿ ಕ್ಲೇಶಗೊಂಡವರಾಗಿ ಪಟ್ಟಣವನ್ನು ಸೇರಿದರು.

ಒಂದು ದಿನ ಅಮಾತ್ಯರಾಕ್ಷಸನಿಂದ ನಿಯುಕ್ತರಾಗಿದ್ದ ಗೂಢಚಾರರು ಆತುರ ಆತುರವಾಗಿ ಪಾಟಲೀಪುರಕ್ಕೆ ಬಂದು ರಾಕ್ಷಸನನ್ನು ಕಂಡು 'ಸ್ವಾಮಿ, ಪರ್ವತರಾಜನು ಚಂದ್ರಗುಪ್ತನ ಪಕ್ಷವನ್ನು ವಹಿಸಿ ಅಪಾರಸೇನಾಪರಿವೃತನಾಗಿ ನಮ್ಮ ರಾಜ್ಯದ ಮೇಲೆ ಯುದ್ಧಾತುರದಿಂದ ಬರುತ್ತಿದ್ದಾನೆ. ಶತ್ರುಪಕ್ಷದವರು ನಮ್ಮರಾಜ್ಯದ ಗಡಿದುರ್ಗವನ್ನು ಹಿಡಿದು ಮುನ್ನುಗ್ಗಿ ಬರುತ್ತಿದ್ದಾರೆ. ನಮ್ಮ

ಗುಪ್ತಚರರಲ್ಲಿ ಕೆಲವರು ಅವರ ಕೈಗೆ ಸಿಕ್ಕಿಬಿದ್ದರು. ನಾವು ಬಲುಪ್ರಯಾಸದಿಂದ ತಪ್ಪಿಸಿಕೊಂಡು ಬಂದೆವು.' ಎಂದು ವಿಜ್ಞಾಪಿಸಿಕೊಂಡರು.

ಅದನ್ನು ಕೇಳಿ ರಾಕ್ಷಸನು ಮನಸ್ಸಿನಲ್ಲಿ 'ಅಯ್ಯೋ, ನಂದರು ಮೌರ್ಯರನ್ನು ಕೊಂದು ತಾವು ಸುಖಿಗಳಾಗಬೇಕೆಂದು ಬಯಸಿದರೆ ದೈವವೊಂದು ಬಗೆಯಿತು. ದೈವಯೋಗದಿಂದ ಚಂದ್ರಗುಪ್ತನು ಬದುಕಿ ಶತ್ರುಶೇಷ ಉಳಿದಂತಾಯಿತು. ಅಗ್ನಿಗೆ ವಾಯುವಿನ ಸಹಾಯ ದೊರೆತಂತೆ ಆತನಿಗೆ ದಕ್ಷನಾದ ಚಾಣಕ್ಯನ ಸಹಾಯ ದೊರಕಿತು. ಚಾಣಕ್ಯಚಂದ್ರಗುಪ್ತರು ಪರ್ವತರಾಜನ ಸಹಾಯದಿಂದ ನಂದರ ಮೇಲೆ ದಂಡೆತ್ತಿ ಬರುವುದನ್ನು ನೋಡಿದರೆ ಇದು ದೈವಸಂಕಲ್ಪವೆಂದೇ ತೋರುತ್ತಿದೆ. ಇದರಿಂದ ನಂದರಿಗೆ ಬಲವದ್ವಿರೋಧ ಉಂಟಾದಂತಾಯಿತು' ಎಂದು ಭಾವಿಸಿದನು.

ಅಮಾತ್ಯನು ನಂದರನ್ನು ಕಂಡು ಮುಂದೇನು ಮಾಡಬೇಕೆಂಬುದನ್ನು ಅವರೊಡನೆ ಆಲೋಚನೆ ಮಾಡಿದನು. ನಂದರು ಕಳವಳಗೊಂಡವರಾಗಿ ಚಂದ್ರಗುಪ್ತನನ್ನು ಶತ್ರುಗಳಿಂದ ಬೇರ್ಪಡಿಸಿ ನಿಗ್ರಹಿಸುವ ಭಾರವನ್ನು ರಾಕ್ಷಸನಿಗೆ ವಹಿಸಿ, ಅನರ್ಘ್ಯವಸ್ತ್ರಭೂಷಣಾದಿಗಳಿಂದ ಸನ್ಮಾನಿಸಿ ಕಳುಹಿಸಿದರು.

ಬಳಿಕ ರಾಕ್ಷಸನು ಸೇನಾಪತಿಗಳನ್ನೆಲ್ಲಾ ಕರೆಸಿಕೊಂಡು ಪರ್ವತರಾಜನ ಸೇನೆಯನ್ನು ಎದುರಿಸಲು ತಮ್ಮ ಸೇನೆಯು ಸಿದ್ಧವಾಗುವಂತೆ ಆಜ್ಞೆಮಾಡಿದನು. ಯಾರು ಯಾರು ಎಲ್ಲೆಲ್ಲಿ ನಿಂತು ಮುಂದುವರಿಯುತ್ತಿರುವ ಸೇನೆಯನ್ನು ತಡೆದು, ಎದುರಿಸಬೇಕೆಂಬುದನ್ನು ಗೊತ್ತುಮಾಡಿದನು. ಪರ್ವತರಾಜನಿಗೆ ಪೂರ್ವವಿರೋಧಿಗಳಾಗಿದ್ದು ತಮ್ಮಿಂದ ಸಹಾಯ ಪಡೆದಿದ್ದ ದಶಾರ್ಣದೇಶಾಧಿಪತಿಗೂ ಶೂರ ಸೇನಾಧಿಪತಿಗೂ ಕಾಗದಗಳನ್ನು ಬರೆಸಿದನು.

'ನಿಮ್ಮ ವಿರೋಧಿಯಾಗಿದ್ದ ಪರ್ವತರಾಜನು ಚಂದ್ರಗುಪ್ತನಿಗೆ ಸಹಾಯಕನಾಗಿ ನಮ್ಮ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ನಿಮ್ಮ ಕಲಹದಲ್ಲಿ ನಾವು ಮಧ್ಯೆ ಪ್ರವೇಶಿಸಿ ಮಾಡಿದ ಉಪಕಾರವನ್ನು ಮರೆತಿದ್ದಾನೆ. ಇಂತಹ ಕೃತಘ್ನನನ್ನು ಇಲ್ಲಿಯೇ ಧ್ವಂಸಮಾಡುತ್ತೇವೆ. ನೀವು ಈ ಸಮಯದಲ್ಲಿ ಬಹುಸೇನಾಸಮೇತರಾಗಿ ಪರ್ವತರಾಜ್ಯವನ್ನು ಪ್ರವೇಶಿಸಿ, ಅವರ ಗಿರಿದುರ್ಗಗಳನ್ನು ಆಕ್ರಮಿಸಿ ಶಾಹುರೀನಗರವನ್ನು ಸ್ವಾಧೀನಪಡಿಸಿಕೊಳ್ಳಿ. ಅಲ್ಲಿರುವ ಸೈನ್ಯವು ಇತ್ತ ಬರದಂತೆ ತಡೆಯಿರಿ. ಅದರಿಂದ ಆ ದೇಶಗಳು ನಿಮ್ಮದಾಗುವುವು.'

ಇತ್ಯಾದಿ ಸೂಚಿಸಿ ಬರೆದ ಪತ್ರವನ್ನು ಶೀಘ್ರಗಾಮಿಗಳಾದ ಅಶ್ವಾರೋಹಿಗಳ ಮೂಲಕ ಆ ರಾಜರಿಗೆ ಕಳುಹಿಸಿದನು.

ಅಮಾತ್ಯನು ರಾಜಕಾರ್ಯಾಸಕ್ತನಾಗಿದ್ದ ಸಮಯವನ್ನು ನೋಡಿ ಜ್ಯೋತಿಷಮಂತ್ರನೀತಿಗಳಲ್ಲಿ ಕುಶಲತೆಯನ್ನು ತೋರಿಸುತ್ತ ಮೊದಲೇ ರಾಕ್ಷಸನ ಪ್ರೀತಿಗೆ ಪಾತ್ರನಾಗಿದ್ದ ಕ್ಷಪಣಕನಾದ ಜೀವಸಿದ್ಧಿಯು ಅಲ್ಲಿಗೆ ಪ್ರವೇಶ ಮಾಡಿದನು, ಅವನು ಬಂದುದು ಒಳ್ಳೆಯದಾಯಿತೆಂದು ಭಾವಿಸಿ ಆಗ ಗ್ರಹಬಲ ಹೇಗಿರುವುದೋ ತಿಳಿಸಬೇಕೆಂದು ಅವನನ್ನು ಕೇಳಿದನು. ಜೀವಸಿದ್ಧಿಯು ಪ್ರಕೃತ ಪರಿಸ್ಥಿತಿಯನ್ನು ಅರಿತಿದ್ದುದರಿಂದ ಗ್ರಹಬಲವನ್ನು ನೋಡುವಂತೆ ಬೆರಳುಗಳನ್ನು ಎಣಿಸುತ್ತ, ಲೆಕ್ಕಹಾಕುತ್ತ, 'ಅಮಾತ್ಯರೆ, ನೀವು ಕೇಳುತ್ತಿರುವ ಪ್ರಶ್ನೆಯು ಶತ್ರುಗಳ ಆಗಮನವನ್ನು ಸೂಚಿಸುತ್ತಿದೆ. ಈ ಲಗ್ನಕ್ಕೆ ಶತ್ರು ಸ್ಥಾನದ ಗ್ರಹವನ್ನು ಶತ್ರುಗ್ರಹವೇ ನೋಡುತ್ತಿರುವುದರಿಂದ ಶತ್ರುವು ಜೀವ ಸಹಿತ ಉಳಿಯಲಾರನು. ಜಯವು ನಿಮಗೇ ಸಿದ್ಧಿಸುವುದರಲ್ಲಿ ಅನುಮಾನ ವಿಲ್ಲ. ಆದರೂ ಈ ಶುಭಲಗ್ನದಲ್ಲಿ ಪವಿತ್ರವಾದ ನದೀತೀರದಲ್ಲಿ ಜಪಶೀಲ ರಾದ ಬ್ರಾಹ್ಮಣರಿಂದ ಶತ್ರುಪಲಾಯನ ಜಪಮಾಡಿಸಿದರೆ ಅನಿಷ್ಟ ನಿವೃತ್ತಿ ಯಾಗುವುದು. ನಮಗೆ ಪುರದ ಹೊರಗಡೆ ಒಂದು ಪರ್ಣಶಾಲೆಯನ್ನು ಮಾಡಿಸಿ ಕೊಟ್ಟರೆ ನಾವೂ ಅಲ್ಲಿದ್ದುಕೊಂಡು ನಿಮಗೆ ಶ್ರೇಯಸ್ಸನ್ನು ಬಯಸುತ್ತಿರುವೆವು.' ಎಂದು ಹೇಳಿ ಕಣ್ಣುಮುಚ್ಚಿ ಧ್ಯಾನಾಸಕ್ತನಾದಂತೆ ಕುಳಿತನು.

ರಾಕ್ಷಸನು ಬಾಗುರಾಯಣನಿಗೆ ಅನಿಷ್ಟ ನಿವೃತ್ತಿಗಾಗಿ ಹೋಮಶಾಲೆ ಯನ್ನು ನಿರ್ಮಿಸಿ ಅಲ್ಲಿ ಜಪಶೀಲರಾದ ಬ್ರಾಹ್ಮಣರಿಂದ ಶತ್ರುಪಲಾಯನ ಜಪ ವನ್ನು ಮಾಡಿಸಬೇಕೆಂದು ಆಜ್ಞೆಮಾಡಿದನು. ಸಮಯವನ್ನು ನಿರೀಕ್ಷಿಸುತ್ತ ಬಾಗುರಾಯಣನ ಬಳಿ ವೈದ್ಯವೃತ್ತಿಯಲ್ಲಿದ್ದ ಕ್ಷಪಣಕನ ಶಿಷ್ಯನಾದ ಸಿದ್ಧಾರ್ಥಕನು ಅವಕಾಶ ಕಲ್ಪಿಸಿಕೊಂಡು ತಮ್ಮ ಕಾರ್ಯಕ್ಕೆ ಅನುಕೂಲ ವಾಗಿರುವಂತೆ ಬಾಗುರಾಯಣನಿಗೆ 'ಸರಯೂ ನದೀತೀರದಲ್ಲಿ ಜಪಮಾಡಿಸಿ ದರೆ ಕ್ಷಿಪ್ರಫಲ ಸಿದ್ಧಿಸುವುದೆಂದು ಕೇಳಿಬಲ್ಲೆ ' ಎಂದು ಸೂಚಿಸಿದನು.

ಆ ಸಮಯಕ್ಕೆ ಸರಿಯಾಗಿ ಸಿದ್ಧಾರ್ಥಕನ ಮಿತ್ರನು ಮುನಿಯ ವೇಷ ವನ್ನು ಧರಿಸಿ ಬೀದಿಯಲ್ಲಿ ಬರುತ್ತಿದ್ದನು. ಅದನ್ನು ಕಂಡು ಸಿದ್ಧಾರ್ಥಕನು ಎದ್ದು ಹೋಗಿ ಆ ಮುನಿಗಳ ಪಾದಗಳಿಗೆ ವಂದಿಸಿ ಅವರನ್ನು ಕರೆತಂದು

ಅವರು ಮಾಸೋಪವಾಸಿಮಹಾಮುನಿಗಳೆಂದು ಸೇನಾಪತಿಗೆ ಅವರ ಮಹತ್ವ ವನ್ನು ತಿಳಿಸಿದನು. ಬಾಗುರಾಯಣನು ಅಂಥ ಮುನಿಗಳು ಸಮಯಕ್ಕೆ ಒದಗಿದುದು ತಮ್ಮ ಪುಣ್ಯವೆಂದೇ ಭಾವಿಸಿ, ಸಿದ್ಧಾರ್ಥಕನು ಸೂಚಿಸಿದ ಸ್ಥಳ ದಲ್ಲಿ ಜಪಶಾಲೆಯನ್ನು ಮಾಡಿಸಿಕೊಟ್ಟು ಮಾಸೋಪವಾಸಿಗಳು ಅಲ್ಲಿ ಜಪ ವನ್ನು ಮಾಡುತ್ತಿರುವಂತೆ ಅವರನ್ನು ಪ್ರಾರ್ಥಿಸಿಕೊಂಡನು. ಅವರು ಹೇಳಿದ ಬ್ರಾಹ್ಮಣರನ್ನು ಕರೆಸಿಕೊಟ್ಟು ಬೇಕಾದ ಪದಾರ್ಥಗಳನ್ನು ಒದಗಿಸಿದನು. ಮಾಸೋಪವಾಸಿಯು ತನ್ನ ಶಿಷ್ಯರೊಡನೆ ಜಪಶಾಲೆಯಲ್ಲಿ ಹೋಮ ಮಾಡು ವವನಂತೆ ಇರುತ್ತ ಚಾಣಕ್ಯರ ಆಗಮನವನ್ನು ಕಾಯುತ್ತಿದ್ದನು.

## ಭೇದೋಪಾಯ ಭಂಗ

ರಹಸ್ಯಪತ್ರಗಳನ್ನು ಬರೆಯಿಸಲು ಕರೆಸಿದ ರಾಯಸದವರು ಅಮಾತ್ಯನ ಅಪ್ಪಣೆಯನ್ನು ನಿರೀಕ್ಷಿಸುತ್ತಿದ್ದರು. ಕ್ಷಪಣಕನು ಧ್ಯಾನಮಗ್ನನಾಗಿ ಅಲ್ಲಿಯೇ ಕುಳಿತಿದ್ದನು. ಲೋಕವ್ಯವಹಾರದಲ್ಲಿ ಆಸಕ್ತಿಯಿಲ್ಲದ ಅವನನ್ನು ಆಚೆಗೆ ಹೋಗೆಂದು ಕಳುಹಿಸುವುದು ಹೇಗೆಂಬ ದಾಕ್ಷಿಣ್ಯಕ್ಕೊಳಗಾಗಿ, ಅವನಿದ್ದರೂ ತಮಗೇನೂ ಬಾಧಕವಿಲ್ಲೆಂದು ಅಮಾತ್ಯನು ಭಾವಿಸಿ ರಾಯಸದವರಿಗೆ 'ನಮ್ಮಿಂದ ವಿಶೇಷ ಧನವನ್ನು ಸಂಬಳವಾಗಿ ಪಡೆಯುತ್ತ ಪರರಾಜರಬಳಿ ವರ್ತಕ ವೃತ್ತಿಯಿಂದಿದ್ದು ಆ ರಾಜರ ಪ್ರೀತಿವಿಶ್ವಾಸಗಳನ್ನು ಗಳಿಸಿ ಸಮಯಬಂದಾಗ ಸಹಾಯಮಾಡಲು ನಿಯುಕ್ತರಾಗಿರುವ ಕೆಲವರು ಗೂಢಮಂತ್ರಿಗಳಿರುವರು. ಅದರಂತೆ ಕುಲಾತಪತಿಯಲ್ಲಿ ಧನಗುಪ್ತನೂ ಮಲಯಪತಿ ಬಳಿ ಕೃಷ್ಣದಾಸನೂ ಕಾಶ್ಮೀರಪತಿಯಲ್ಲಿ ಶಾರೀಕಶೆಟ್ಟಿಯೂ ಸಿಂಧುಪತಿಯ ಬಳಿ ಹೀರದಾಸನೂ ಪಾರಶೀಕಪತಿಯಲ್ಲಿ ಮುಕುಂದದಾಸನೂ ಗಾಂಧಾರಪತಿಯಲ್ಲಿ ವಜ್ರಲಾಲನೂ ಕಾಂಬೋಜದಲ್ಲಿ ಬಾಲದಾಸನೂ ತಮ್ಮತಮ್ಮ ಕಾರ್ಯನಿರ್ವಹಣೆಯಲ್ಲಿದ್ದಾರೆ. ಇವರೆಲ್ಲರಿಗೂ ನಮ್ಮ ಹೆಸರಿನಿಂದ ಕಾಗದಗಳನ್ನು ಬರೆಸತಕ್ಕದ್ದು."

"ನೀವು ನಂದರಲ್ಲಿ ಸ್ವಾಮಿಭಕ್ತಿಯುಳ್ಳವರಾಗಿದ್ದೀರಿ. ಈಗ ನಿಮ್ಮ ಸ್ವಾಮಿನಿಷ್ಠೆಯನ್ನು ಪ್ರಕಟಗೊಳಿಸುವ ಕಾಲವು ಒದಗಿಬಂದಿದೆ. ನಿಮಗೆ ಆಶ್ರಯನೀಡಿರುವ ಅರಸರುಗಳು ಈಗ ಚಂದ್ರಗುಪ್ತನಿಗೆ ಆಶ್ರಯವಾಗಿ ನಂದರ ಮೇಲೆ ದಂಡೆತ್ತಿ ಬರುತ್ತಿರುವ ಪರ್ವತರಾಜನಿಗೆ ಬೆಂಬಲಿಗರಾಗಿ ಬಂದಿರುವುದು

ನಿಮಗೂ ಗೊತ್ತಿರುವುದಷ್ಟೆ ? ಈಗ ಎಷ್ಟು ದ್ರವ್ಯ ವ್ಯಯವಾದರೂ ಆಗಲಿ, ನೀವು ನಿಮ್ಮ ದೊರೆಗಳಿಗೆ ಹೇಗೆ ಹೇಳಬೇಕೋ ಹೇಳಿ ಹೇಗಾದರೂ ಒಡಂಬಡಿಸಿ ಯಾವ ರೀತಿಯಿಂದಾದರೂ ಚಂದ್ರಗುಪ್ತನನ್ನು ಸಂಹರಿಸುವಂತೆ ಮಾಡುವುದು. ಇದೇ ಮುಖ್ಯವಾಗಿ ನಡೆಯಬೇಕಾದದ್ದು. ಅದು ಅಶಕ್ಯವಾದರೆ ಅವರು ಪರ್ವತರಾಜನ ಪಕ್ಷವನ್ನು ತ್ಯಜಿಸಿ ನಂದರಿಗೆ ಸಹಾಯಮಾಡುವುದು. ಅದೂ ಸಾಗದಿದ್ದರೆ ಕಾರಣಾಂತರಗಳಿಂದ ಕಲಹವನ್ನು ಮಾಡಿ ಪರ್ವತರಾಜನನ್ನು ಳಿದು ತಮ್ಮ ತಮ್ಮ ದೇಶಗಳಿಗೆ ತೆರಳಲಿ. ಅದೂ ಅಸಾಧ್ಯವಾಗುವುದಾದರೆ ಯುದ್ಧ ಕೈಗೂಡಿದಾಗ ನಂದಸೇನೆಯ ಮೇಲೆ ಕೈಯೆತ್ತದೆ ಅವರು ತಟಸ್ಥರಾಗಿರುವುದು. ಇವುಗಳಲ್ಲಿ ಯಾವರೀತಿ ನಮಗೆ ಸಹಾಯಕರಾದರೂ ಅವರು ಕೇಳಿದಷ್ಟು ಹಣ ಕೊಡೋಣ. ಶಕ್ತನಾದ ಪರ್ವತರಾಜನೊಡನೆ ವಿರೋಧ ಕಟ್ಟಿಕೊಂಡು ಹೇಗೆ ಬಾಳುವುದೆಂಬ ಶಂಕೆಯನ್ನು ಅವರು ಇಟ್ಟುಕೊಳ್ಳಬೇಕಾಗಿಲ್ಲ. ಯುದ್ಧದಲ್ಲಿ ಪರ್ವತರಾಜನು ಹತನಾಗುವುದು ನಿಶ್ಚಯ. ನಮಗೆ ಮಾಡಿದ ಅವರ ಉಪಕಾರಕ್ಕೆ ಪ್ರತಿಯಾಗಿ ಪರ್ವತರಾಜನ ದೇಶಕೋಶಗಳನ್ನೆಲ್ಲಾ ಅವರಿಗೆ ಸಮನಾಗಿ ಹಂಚಿಕೊಡುವೆವು.” ಹೀಗೆಂದು ಬರೆಸಿ ಅಮಾತ್ಯನು ಅವುಗಳಿಗೆ ಮುದ್ರೆಹಾಕಿಸಿ ನಾಲ್ಕುಜನ ದಕ್ಷರಾದ ದೂತರ ವಶಕ್ಕೆ ಕೊಟ್ಟು, ಅವರು ವೇಷಾಂತರಗಳಿಂದ ಪರ್ವತರಾಜನ ಸೇನೆಯನ್ನು ಹೊಕ್ಕು ಅಲ್ಲಿ ಸೇರಿರುವ ಮೇಲೆ ಸೂಚಿಸಿದ ವರ್ತಕರಿಗೆ ತಲುಪಿಸುವಂತೆ ಹೇಳಿಕಳುಹಿಸಿದನು.

ಇದನ್ನೆಲ್ಲ ಕೇಳುತ್ತ ಕುಳಿತಿದ್ದ ಕ್ಷಪಣಕನು ಧ್ಯಾನದಿಂದೆಚ್ಚತ್ತವನಂತೆ ಕಣ್ಣು ಬಿಟ್ಟು ಬುದ್ಧೇಶ ಬುದ್ಧೇಶ ಎಂದು ಹೇಳಿಕೊಳ್ಳುತ್ತ ಭಿಕ್ಷಾಸಮಯವೆಂಬ ನೆವದಿಂದ ಅಮಾತ್ಯನ ಅಪ್ಪಣೆ ಪಡೆದು ಅಲ್ಲಿಂದ ಹೊರಟನು. ‘ಈಗ ಬರೆಸಿರುವ ಕಾಗದಗಳ ಮೇರೆಗೆ ಕಾರ್ಯನಡೆದು ರಾಕ್ಷಸನ ಭೇದತಂತ್ರ ಸಿದ್ಧಿಸಿತೆಂದರೆ ಚಾಣಕ್ಯನ ಶಪಥವು ನಿರರ್ಥಕವಾಗುವುದು. ನಮ್ಮ ಪ್ರಯತ್ನಗಳೆಲ್ಲಾ ವಿಫಲವಾಗುವುವು. ಆದುದರಿಂದ ಈ ಪತ್ರಗಳು ವರ್ತಕರಿಗೆ ತಲುಪುವ ಮುಂಚೆಯೇ ಈ ಸಂಗತಿಯನ್ನು ಚಾಣಕ್ಯರಿಗೆ ತಿಳಿಸಿ ರಾಕ್ಷಸನ ಪ್ರಯತ್ನ ಸಿದ್ಧಿಸದಂತೆ ಮಾಡಬೇಕು.’ ಎಂದು ನಿಶ್ಚಯಿಸಿ ಕ್ಷಪಣಕನು ಅಲ್ಲಿ ನಡೆದ ವಿಚಾರವನ್ನೂ ವಿವರವಾಗಿ ಬರೆದು ತನ್ನ ಶಿಷ್ಯನಾದ ವೇಗಶರ್ಮನ ಕೈಗೆ ಕೊಟ್ಟನು. ‘ಈಗ ರಾಕ್ಷಸನ ಭೇದೋಪಾಯದಿಂದ ಚಾಣಕ್ಯನ ಸಂಕಲ್ಪ ಕೆಡುವಂತಿದೆ, ನೀನು

ಬೇಗ ಪ್ರಯಾಣಮಾಡಿ ಈ ಕಾಗದವನ್ನು ಚಾಣಕ್ಯರಿಗೆ ಕೊಡು. ಅಗೋ ನೋಡು ; ಆ ಮಂಟಪದ ಬಳಿ ಯಾವುದೋ ಒಂದು ಕುದುರೆಯನ್ನು ಕಟ್ಟಿ ಹಾಕಿದೆ. ಈ ಕಾಡಿಗೆಯನ್ನು ನೀನು ಹಚ್ಚಿಕೊಂಡು ಅದಕ್ಕೂ ಹಚ್ಚು. ಈ ಚೂರ್ಣವನ್ನು ನೀರಿನಲ್ಲಿ ಕದಡಿ ಕುಡಿದರೆ ನಿನಗೆ ಹಸಿವು ಬಾಯಾರಿಕೆಗಳೂ ದಣಿವೂ ಉಂಟಾಗುವುದಿಲ್ಲ. ಕುದುರೆಗೂ ಇದನ್ನು ಕುಡಿಸು. ರಾಜಮಾರ್ಗ ವನ್ನು ಬಿಟ್ಟು ಹತ್ತಿರದ ಅರಣ್ಯಮಾರ್ಗದಲ್ಲಿ ಪ್ರಯಾಣಬೆಳೆಸು. ಕಾಗದ ಕೊಡು ವಾಗ ಕಾಡಿಗೆಯನ್ನು ತೊಳೆದುಕೊಂಡು ಕೊಡು. ಈ ಕೆಲಸವನ್ನು ನೀನು ಸಮರ್ಪಕವಾಗಿ ಮಾಡಿಕೊಂಡು ಬಂದದ್ದೇ ಆದರೆ ನಿನಗೆ ಸದ್ವಿದ್ಯೆಯನ್ನು ಪದೇ ಶಿಸುವೆನು' ಎಂದು ಹೇಳಿ ಕಳುಹಿಸಿದನು.

ಅಮಾತ್ಯನ ನೇಮದಂತೆ ಸೇನಾಪತಿಗಳು ತಮ್ಮ ತಮ್ಮ ಸೇನೆಗಳೊಡನೆ ಪರ್ವತರಾಜನ ಸೈನ್ಯವನ್ನೆದುರಿಸಲು ಹೊರಟರು. ಪುರದ ರಕ್ಷಣೆಗಾಗಿ ಬಾಗು ರಾಯಣನು ನಿಯಮಿಸಲ್ಪಟ್ಟನು. ಪ್ರಭುಗಳಾದ ನಂದರು ಸೇನಾನಾಯಕರಿಗೆ ಸಮಯೋಚಿತವಾದ ಸಲಹೆಗಳನ್ನಿತ್ತು ರಾಜಕಾರ್ಯಕ್ಕೆ ಲೋಪವಾಗದಂತೆ ಕರ್ತವ್ಯ ನಿರ್ವಹಿಸಬೇಕೆಂದು ಅನುಜ್ಞೆಯಿತ್ತು ಉಚಿತ ಮರ್ಯಾದೆಗಳೊಡನೆ ಕಳುಹಿಸಿದರು.

ಕ್ಷಪಣಕನು ಹೇಳಿದಂತೆ ವೇಗಶರ್ಮನು ಚಾಣಕ್ಯನಿಗೆ ಕಾಗದವನ್ನು ತಲುಪಿಸಿದನು. ಚಾಣಕ್ಯನು ಕಾಗದವನ್ನು ಓದಿಕೊಂಡು ಚಂದ್ರಗುಪ್ತ ನೊಡನೆ 'ಕುಮಾರ, ಅಮಾತ್ಯರಾಕ್ಷಸನು ಪರ್ವತರಾಜನಿಗೂ ಅವನೊಡನೆ ಬಂದಿರುವ ಅರಸುಗಳಿಗೂ ಭೇದೋಪಾಯವನ್ನು ಕಲ್ಪಿಸಿ, ಆ ಮೂಲಕ ನಿನ್ನನ್ನು ನಿಗ್ರಹಿಸಿ, ಸುಲಭಜಯ ಪಡೆಯಬಹುದೆಂದು ಯೋಚಿಸಿ ತನ್ನ ಕಡೆಯ ವರಾಗಿ ಇಲ್ಲಿರುವ ರಾಜರ ಬಳಿ ವರ್ತಕವೇಷದಿಂದಿರುವ ಧನಗುಪ್ತನೇ ಮೊದ ಲಾದ ಎಂಟು ಮಂದಿ ಗೂಢಮಂತ್ರಿಗಳಿಗೆ ಕಾಗದ ಬರೆದು ಕಳುಹಿಸಿದ್ದಾನೆ. ನನ್ನ ಮಿತ್ರನಾದ ಇಂದುಶರ್ಮನು ಆ ವರ್ತಕರ ಹೆಸರುಗಳನ್ನು ಮುಂಚಿತ ವಾಗಿ ಬರೆದು ಕಳುಹಿಸಿರುವುದರಿಂದ ಒಳ್ಳೆಯದಾಯಿತು. ನಂದರ ಬಲವು ಅಧಿಕವಾಗಿರುವುದರಿಂದ ಸೇನಾಪರಿವೃತರಾದ ಅವರನ್ನು ನಿಗ್ರಹಿಸುವುದು ಕಷ್ಟ. ಆದರಿಂದ ನಂದರನ್ನು ಸೈನ್ಯದಿಂದ ಬೇರ್ಪಡಿಸಿ ಕಪಟದಿಂದಲೇ ಅವರನ್ನು

ವಧಿಸಬೇಕು.' ಎಂದು ತಿಳಿಸಿ ಆ ವರ್ತಮಾನವನ್ನು ಪರ್ವತರಾಜನಿಗೂ ತಿಳಿಸಿದನು.

ಅಷ್ಟರಲ್ಲಿ ಶೇಖರನ ಕಡೆಯವರು ಪಾಟಲೀಪುರದಿಂದ ಬಂದಿದ್ದ ಇಬ್ಬರು ಗುಪ್ತಚಾರರನ್ನು ಬಂಧಿಸಿ ಕರೆತಂದರು. ಅವರಲ್ಲಿ ಸಿಕ್ಕಿದ ಕಾಗದಗಳನ್ನು ನೋಡಲು ಅವು ವರ್ತಕರಾದ ಧನಗುಪ್ತನಿಗೂ ಶಾರೀಕಶೆಟ್ಟಿಗೂ ರಾಕ್ಷಸನು ಕಳುಹಿಸಿದ್ದ ಕಾಗದಗಳಾಗಿದ್ದು ಚಾಣಕ್ಯನು ಹೇಳಿದಂತೆ ಒಕ್ಕಣೆಗಳನ್ನು ಒಳಗೊಂಡಿದ್ದುವು. ಆಗ ಚಾಣಕ್ಯನು ಕ್ಷಪಣಕನು ತನಗೆ ಕಳುಹಿಸಿದ್ದ ಕಾಗದವನ್ನು ಪರ್ವತರಾಜನಿಗೆ ತೋರಿಸಿದನು. ಪರ್ವತೇಶ್ವರನು ಚಾಣಕ್ಯನ ಬುದ್ಧಿಶಕ್ತಿಗೆ ಕಡುಮೆಚ್ಚಿ, ಆ ಎಂಟುಮಂದಿ ವರ್ತಕರಿಗೆ ಏನು ಮಾಡಬೇಕೆಂದು ಅವನನ್ನೇ ಕೇಳಿದನು. ಚಾಣಕ್ಯನು 'ಈಗ ವರ್ತಕರನ್ನು ದಂಡಿಸಿದರೆ ಆ ಅರಸುಗಳಿಗೆ ಮುಖಭಂಗವಾಗಬಹುದು. ಇದು ಸಮಯವಲ್ಲವಾದುದರಿಂದ ಶಿಕ್ಷಿಸದೆ ಕಾವಲಿನವರೊಡನೆ ಅವರವರ ದೇಶಕ್ಕೆ ಕಳುಹಿಸುವಂತೆ ಆಯಾ ಅರಸುಗಳಿಗೆ ತಿಳಿಸಿದರೆ ಸಾಕು. ಹೇಗೂ ರಾಕ್ಷಸನ ಭೇದೋಪಾಯವು ಭಂಗವಾಯಿತು' ಎಂದನು.

ವರ್ತಕರು ನಂದರ ಭೃತ್ಯರೆಂಬ ಕಾರಣದಿಂದ ಅವರೆಲ್ಲರೂ ಅಲ್ಲಿಂದ ಕಳುಹಿಸಲ್ಪಟ್ಟರು. ಜೋಗಿಯ ವೇಷದಿಂದ ಬಂದಿದ್ದ ಚಾರನ ಮೂಗುಕೊಯ್ಸಿ ದಂಡಿನಲ್ಲಿ ಡಂಗೂರ ಹಾಕಿಸಲು, ಪಾಟಲೀಪುರದಿಂದ ಬಂದಿದ್ದ ಉಳಿದ ಗುಪ್ತಚಾರರು ಹೆದರಿ ತಮ್ಮ ಬಳಿಯಿದ್ದ ಕಾಗದಗಳನ್ನು ನಾಶಪಡಿಸಿ ತಲೆ ಮರೆಸಿಕೊಂಡು ಪರಾರಿಯಾದರು.

## ಕಪಟೋಪಾಯ

ಚಾಣಕ್ಯನು ಪರ್ವತರಾಜನೊಡನೆ 'ರಾಕ್ಷಸನು ಮಾಡುತ್ತಿರುವ ಭೇದೋಪಾಯಗಳು ಪ್ರವಾಹಕ್ಕೆ ಕಟ್ಟಿದ ಮಳಲಸೇತುವೆಯಂತೆ ನಾಶವಾಗುವುವು. ಇದು ನಿನಗೆ ಒಂದು ಜಯವೆಂದೇ ತಿಳಿಯಬೇಕು. ಪ್ರಕೃತ ನಂದರಿಗೆ ಮಿತ್ರರಾಗಿರುವ ಕಾಶೀರಾಜ,ಮತ್ಸ್ಯದೇಶಾಧಿಪತಿ, ಮಿಥಿಲೆಯ ಅರಸು–ಇವರುಗಳಿಗೆ ನಿನಗೆ ಸಹಾಯ ಮಾಡಲು ಬರುವಂತೆ ಒಂದು ನಿರೂಪವನ್ನು ಬರೆದು ಕಳುಹಿಸು. ಅದರಿಂದಾಗುವ ಪ್ರಯೋಜನವು ಕಡೆಯಲ್ಲಿ ನಿನಗೇ ತಿಳಿಯುವುದು'

—ಎಂದು ಹೇಳಿ ಮೂವರಿಗೂ ಪರ್ವತರಾಜನಿಂದ ಕಾಗದಗಳನ್ನು ಬರೆಸಿ ಕಳುಹಿಸಿದನು. ಕಾಶೀರಾಜನಲ್ಲಿಗೆ ಹೋಗುವ ಕಮಲಾಪೀಡನಿಗೆ ರಹಸ್ಯವಾಗಿ ಹೇಳಬೇಕಾದುದನ್ನು ತಿಳಿಸಿದನು.

ಬಳಿಕ ಚಾಣಕ್ಯನು ಏಕಾಂತದಲ್ಲಿ ವೇಗಶರ್ಮನನ್ನು ತಮ್ಮ ಕಡೆಯುವರು ಯಾರು ಯಾರು ಯಾವ ಯಾವ ಕೆಲಸಗಳಲ್ಲಿ ನಿಯುಕ್ತರಾಗಿದ್ದಾರೆಂಬುದನ್ನು ಕೇಳಿದನು. ವೇಗಶರ್ಮನು—ಉಪಾಧ್ಯಾಯರೆ, ಇಂದುಶರ್ಮರು, ಕ್ಷಪಣಕ ವೇಷದಿಂದ ಜ್ಯೋತಿಷ ಮೊದಲಾದ ವಿದ್ಯಾಕೌಶಲ್ಯಗಳನ್ನು ತೋರಿಸುತ್ತ ಅವರಿಗೆ ಆಪ್ತರಂತಿದ್ದು ರಾಜಕಾರ್ಯಗಳನ್ನು ತಿಳಿಯುತ್ತಿದ್ದಾರೆ. ಸಿದ್ಧಾರ್ಥಕನು ಬಾಗುರಾಯಣ ಶಕಟದಾಸರ ಬಳಿ ಆಪ್ತವೈದ್ಯನಂತಿದ್ದಾನೆ. ಸಮಿದ್ಧಾರ್ಥಕನು ಸಾಮುದ್ರಿಕಲಕ್ಷಣಗಳನ್ನು ಹೇಳುತ್ತ ಭದ್ರಭಟಾದಿ ನಾಯಕರನ್ನು ಆಶ್ರಯಿಸಿದ್ದಾನೆ. ಪಶುಲೋಮನು ಮಂತ್ರಜ್ಞನಾಗಿ ಡಿಂಗಿರಾತನ ಹೆಂಡತಿಗೆ ಹಿಡಿದಿರುವ ಪಿಶಾಚಿಯನ್ನು ಬಿಡಿಸುವವನಂತೆ ಇದ್ದಾನೆ." ಎಂದು ಹೇಳಿದುದನ್ನು ಕೇಳಿ ಚಾಣಕ್ಯನು ಸಂತೋಷಹೊಂದಿದನು.

ಬಳಿಕ 'ವೇಗಶರ್ಮ, ಈಗ ಜಪಶಾಲೆಯಲ್ಲಿರುವ ಮಾಸೋಪವಾಸಿ ಮುನಿಗಳು ನಂದರು ಪುರದಿಂದ ಹೊರಟು ದಂಡಿನ ಪಾಳಯಕ್ಕೆ ಬರುವ ಸಮಯದಲ್ಲಿ ಶಿಷ್ಯರೊಡಗೂಡಿ ಅವರನ್ನು ಕಂಡು, ಮಂತ್ರಾಕ್ಷತೆ ಕೊಟ್ಟು, ಜಪದ ವಿಷಯದಲ್ಲಿ ಅವರಿಗೆ ನಂಬಿಕೆಯುಂಟಾಗುವಂತೆ ಮಾಡಿ, ಆ ಮಾರನೆಯ ದಿನ ನಡೆಯುವ ಹೋಮದ ಪೂರ್ಣಾಹುತಿ ದರ್ಶನಕ್ಕೆ ಅವರು ಸೇನೆಯನ್ನುಳಿದು ಜಪಶಾಲೆಗೆ ಬರುವಂತೆ ಮಾಡಲಿ. ಪೂರ್ಣಾಹುತಿ ಸಮಯ ನನಗೆ ತಿಳಿಸಲಿ. ಆಗ ನಾನು ಉಳಿದ ಕೆಲಸ ನೋಡಿಕೊಳ್ಳುತ್ತೇನೆ.' ಎಂದು ಹೇಳಿ ಅವನನ್ನು ಇಂದುಶರ್ಮನ ಬಳಿಗೆ ಕಳುಹಿಸಿದನು.

ನಿಯೋಗಿ ಕಮಲಾಪೀಡನು ಕಾಶೀರಾಜನನ್ನು ಕಂಡು ಉಚಿತಮರ್ಯಾದೆಯೊಡನೆ ಪರ್ವತರಾಜನು ಕಳುಹಿಸಿದ ನಿರೂಪವನ್ನು ಒಪ್ಪಿಸಿದನು. ಕಾಶೀರಾಜನು ಪತ್ರವನ್ನು ಓದಿಕೊಂಡು ನಿಯೋಗಿಗೆ ನಾಳೆ ಬಂದು ನೋಡುವಂತೆ ಹೇಳಿ ಬಿಡಾರಕ್ಕೆ ಕಳುಹಿಸಿದನು. ಬಳಿಕ ಆ ವಿಷಯವನ್ನು ನಂದರ ಗಮನಕ್ಕೆ ತಂದು ಅವರಪ್ರೀತಿಯನ್ನು ಹೆಚ್ಚಿಸಿಕೊಳ್ಳಬೇಕೆಂದು ಯೋಚಿಸಿದನು. ನಂದರಿಗೆ ಕಾಗದ ಬರೆದು ಮುದ್ರೆಯೊತ್ತಿ ಅದರ ಸಂಗಡ ತನಗೆ ಬಂದಿದ್ದ ಪರ್ವತರಾಜನ

ನಿರೂಪವನ್ನೂ ಸೇರಿಸಿ ಇಬ್ಬರು ಅಶ್ವಾರೋಹಿ ಚಾರರಿಗೆ ಕೊಟ್ಟು 'ನೀವು ಈ ಪತ್ರವನ್ನು ಶೀಘ್ರವಾಗಿ ಪಾಟಲೀಪುರಕ್ಕೆ ಒಯ್ದು ಅಮಾತ್ಯರಾಕ್ಷಸನಿಗೆ ಕೊಟ್ಟು ಇದಕ್ಕೆ ಆತನಿಂದ ಉತ್ತರವನ್ನು ಬರೆಸಿಕೊಂಡು ನಾಳೆ ಸಂಜೆಯೊಳಗಾಗಿ ಬರಬೇಕೆಂದು ನೇಮಿಸಿದನು. ಕಮಲಾಪೀಡನ ಚಾರರು ರಾಜದೂತರಿಬ್ಬರು ಅಶ್ವಾರೋಹಿಗಳಾಗಿ ಪಾಟಲೀಪುರದ ಕಡೆಗೆ ಪ್ರಯಾಣಮಾಡಿದ ಸಂಗತಿಯನ್ನು ತಿಳಿಸಿದರು. ಕಮಲಾಪೀಡನು ಚಾರರಿಗೆ ಅವರು ಯಾವಾಗ ಹಿಂದಿರುಗುವರೆಂಬುದನ್ನು ತಿಳಿದು ಕೂಡಲೆ ತನಗೆ ತಿಳಿಸುವಂತೆ ಹೇಳಿದನು.

ರಾಕ್ಷಸನು ಕಾಶೀರಾಜನಿಂದ ಬಂದ ಕಾಗದಗಳನ್ನು ಓದಿಕೊಂಡು ನಂದರಿಗೆ ಆ ಸಮಾಚಾರ ತಿಳಿಸಿದನು. ಅವರು ಪರಮಮಿತ್ರನೂ ಕಾರ್ಯದಕ್ಷನೂ ಆದ ಕಾಶೀರಾಜನನ್ನು ಹೊಗಳಿ ಅವನಿಗೆ ನಿರೂಪವನ್ನು ಬರೆಸಿದರು. "ನೀವು ಕಳುಹಿಸಿದ ಎರಡು ಕಾಗದಗಳನ್ನೂ ನೋಡಿದೆವು. ನಮ್ಮ ನಿಮ್ಮ ಮಿತ್ರತ್ವವನ್ನು ಅರ್ಥಮಾಡಿಕೊಳ್ಳದೆ ಪರ್ವತರಾಜನು ಮೂಢತನದಿಂದ ನಿಮಗೆ ಸಹಾಯಕ್ಕಾಗಿ ಕಾಗದ ಬರೆದು ಕಳುಹಿಸಿರುವುದು ಒಳ್ಳೆಯದೇ ಆಯಿತು. ಈ ಸಮಯದಲ್ಲಿ ನೀವು ಪರ್ವತರಾಜನಿಗೆ ಸಹಾಯಮಾಡಲು ಬರುವಂತೆ ಪತ್ರ ಬರೆದು ಕಳುಹಿಸಿ, ಸೇನಾಸಮೇತರಾಗಿ ಹೊರಟು ಮಾರ್ಗದಲ್ಲಿ ತಂಗಿರಿ. ನೀವು ಸಹಾಯಕ್ಕೆ ಬಂದರೆಂದು ನಂಬಿ ಸಂತೋಷದಿಂದ ನಿಮ್ಮನ್ನು ಎದುರುಗೊಳ್ಳುವುದಕ್ಕೆ ಚಂದ್ರಗುಪ್ತನನ್ನೇ ಕಳುಹಿಸಬಹುದು. ಹಾಗೆ ಚಂದ್ರಗುಪ್ತನೇನಾದರೂ ಬಂದರೆ ಅಲ್ಲಿಯೇ ಅವನನ್ನು ಕೊಂದುಬಿಡಿ. ಹಾಗಲ್ಲದೆ ರಾಜಪುತ್ರ ಮಲಯಕೇತುವನ್ನು ಕಳುಹಿಸಿದರೆ ಅವನನ್ನು ಸೆರೆಹಿಡಿದು ನಮ್ಮೆಡೆಗೆ ಕಳುಹಿಸಿ. ಒಂದು ವೇಳೆ ಬೇರೆ ಯಾರಾದರೂ ಬಂದರೆ ಸಂತೋಷಗೊಂಡು ಪರ್ವತರಾಜನ ಸೇನೆಯಲ್ಲಿದ್ದು ಸಮಯ ನೋಡಿ ಚಂದ್ರಗುಪ್ತನನ್ನು ಸಂಹರಿಸಿ. ಇದರಿಂದ ಮುಂದೆ ನಿಮಗೆ ಅಪಾರ ಲಾಭವಾಗುವುದು."

ಕಾಗದಕ್ಕೆ ಮುದ್ರೆಯೊತ್ತಿಸಿ ಕಾಗದವನ್ನು ತಂದಿದ್ದ ಚಾರರ ಕೈಗೆ ಕೊಟ್ಟರು. ಅವರು ಸಕಾಲದಲ್ಲಿ ಅದನ್ನು ಕಾಶೀರಾಜನಿಗೆ ತಲುಪಿಸಿದರು. ಕಾಶೀರಾಜನು ಅದನ್ನು ಓದಿಕೊಂಡು ಪರ್ವತೇಶ್ವರನ ನಿಯೋಗಿಯನ್ನು ಕರೆಸಿಕೊಂಡನು. ಆ ವೇಳೆಗೆ ಕಮಲಾಪೀಡನ ಚಾರರು ಪಾಟಲೀಪುರಕ್ಕೆ ಹೋಗಿದ್ದ ಕುದುರೆಯಾಳುಗಳು ಹಿಂದಿರುಗಿ ಬಂದ ಸಂಗತಿ ತಿಳಿಸಿದ್ದರು. ಕಾಶೀರಾಜನು

—ನಿಯೋಗಿಯೆ, ಪರ್ವತರಾಜರು ನಮ್ಮ ಮೇಲೆ ವಿಶ್ವಾಸವಿಟ್ಟು ನಮ್ಮ ಸಹಾಯ ಬಯಸಿರುವಾಗ ನಾವು ಮೀರುವುದು ಉಚಿತವಲ್ಲ. ಸೇನಾ ಸಮೇತರಾಗಿ ನಾಳೆಯೇ ಹೊರಡುತ್ತೇವೆ. ಈ ಸಂಗತಿಯನ್ನು ನಿಮ್ಮ ಪ್ರಭುಗಳಿಗೆ ಬರೆದು ಕಳುಹಿಸು—ಎಂದು ಹೇಳಿದನು.

"ಮಹಾರಾಜರೆ, ತಾವು ಸಹಾಯಕ್ಕೆ ಬರುವರೆಂಬುದು ನಿಶ್ಚಯವಾದ ಮೇಲೆ ತಮ್ಮನ್ನು ಗೌರವದಿಂದ ಎದುರುಗೊಳ್ಳಲು ನಮ್ಮ ದೊರೆಗಳೇ ಬರಬೇಕಾದುದು ಉಚಿತವು; ಅಥವಾ ಚಂದ್ರಗುಪ್ತನಾಗಲಿ ರಾಜಕುಮಾರ ರಾಗಲಿ ಬರಬೇಕಾಗುವುದು. ತಾವು ಸಮ್ಮತಿಸಿರುವ ಸಂಗತಿಯನ್ನು ಈಗಲೇ ನಮ್ಮ ಪ್ರಭುಗಳಿಗೆ ಬರೆದು ಕಳುಹಿಸುತ್ತೇನೆ. ಅಲ್ಲಿಂದ ಉತ್ತರ ಬಂದ ಮೇಲೆ ತಾವು ಪ್ರಯಾಣಬೆಳೆಸಿದರೆ ತಮ್ಮ ಗೌರವಕ್ಕೆ ತಕ್ಕಂತೆ ತಮ್ಮನ್ನು ಸನ್ಮಾನ ದಿಂದ ಕರೆದುಕೊಂಡು ಹೋಗಲು ಅವಕಾಶ ಕೊಟ್ಟಂತಾಗುವುದು" ಎಂದು ಕಮಲಾಪೀಡನು ಪ್ರಾರ್ಥಿಸಲು ಕಾಶೀರಾಜನು ಅದಕ್ಕೆ ಒಪ್ಪಿದನು. ನಿಯೋಗಿಯು ಅಲ್ಲಿ ನಡೆದ ವಿಶೇಷ ಸಂಗತಿಗಳನ್ನು ಬರೆದು ಚಾರರ ಮೂಲಕ ತ್ವರಿತವಾಗಿ ಚಾಣಕ್ಯನಿಗೆ ತಲುಪಿಸಿದನು.

ಕಾಶೀರಾಜನು ಮಾರನೆಯ ದಿನ ನಿಯೋಗಿಯನ್ನು ಕರೆಸಿ 'ಕಾಗದಕ್ಕೆ ಉತ್ತರ ಬಂತೆ' ಎಂದು ವಿಚಾರಿಸಲು, ಅವನು 'ನಾಳೆ ನಾಡಿದ್ದರಲ್ಲಿ ಬರ ಬಹುದು. ಬಂದಕೂಡಲೆ ನಾನೇ ಬಂದು ವಿಜ್ಞಾಪಿಸಿಕೊಳ್ಳುವೆನು' ಎಂದು ಹೇಳಿದನು. ಮತ್ತೊಂದು ದಿವಸ ಕೇಳಿದಾಗ 'ಕಾರ್ಯಗೌರವದಿಂದ ಬರೆಯು ವುದು ತಡವಾಗಿರಬಹುದು; ಅಥವಾ ಮಾರ್ಗಕ್ಕೆ ತಡೆಯಾಗಿದ್ದೀತು' ಎಂದು ಕಮಲಾಪೀಡನು ನೆವಹೇಳಿ ಕಾಲಹರಣಮಾಡುತ್ತ ಉದ್ದೇಶಪೂರ್ವಕವಾಗಿ ಕಾಶೀರಾಜನ ಪ್ರಯಾಣ ನಡೆಯದಂತೆ ತಡೆಯುತ್ತ ಅಲ್ಲಿಯೇ ಇರುತ್ತಿದ್ದನು.

ನಿಯೋಗಿ ಕಮಲಾಪೀಡನು ಕಳುಹಿಸಿದ ಕಾಗದವನ್ನು ಚಾಣಕ್ಯನು ಓದಿಕೊಂಡು 'ನಂದರೂ ರಾಕ್ಷಸನೂ ಕಾಶೀರಾಜನ ಮೂಲಕ ಚಂದ್ರಗುಪ್ತ ನನ್ನು ನಿಗ್ರಹಿಸಬೇಕೆಂದು ಆಲೋಚಿಸಿರುವಂತೆ ತೋರುತ್ತಿದೆ. ಹೀಗೆ ಅವರು ತಿಳಿಯಬೇಕೆಂದೇ ನಾನು ಈ ಕಪಟೋಪಾಯವನ್ನು ಮಾಡಿದುದು. ಈಗ ನಂದರನ್ನು ಅವರ ಸೇನೆಯಿಂದ ಬೇರ್ಪಡಿಸಲು ಅವಕಾಶ ಸಿಕ್ಕಿದಂತಾಯಿತು. ನಂದರು ಇನ್ನು ನನ್ನ ವಶವಾದರು." ಎಂದು ಭಾವಿಸಿಕೊಂಡನು.

## ಯುದ್ಧ ಭೂಮಿಯಲ್ಲಿ

ರಾಕ್ಷಸನು ತಾನುಮಾಡಿದ ವರ್ತಕರ ಮೂಲಕವಾದ ಭೇದೋಪಾಯವು ಭಗ್ನವಾದುದನ್ನು ದೂತರಿಂದ ಕೇಳಿ ಚಕಿತನಾದನು. ತನ್ನ ರಹಸ್ಯವು ಕ್ಷಪಣಕನಿಂದ ಬಯಲಾಗಿರಬೇಕೆಂದು ಶಂಕಿಸಿ ಅವನನ್ನು ಚಾರರ ಮೂಲಕ ಪರೀಕ್ಷಿಸಿ ನೋಡಿದನು. ಕ್ಷಪಣಕನು ಬಹಳ ಜಾಗರೂಕತೆಯಿಂದಿದ್ದು ತನ್ನ ಗುಟ್ಟು ರಟ್ಟಾಗದಂತೆ ವರ್ತಿಸುತ್ತಿದ್ದನು. ಶತ್ರುಗಳು ನಗರವನ್ನು ಸಮೀಪಿಸಿ ಬರುತ್ತಿದ್ದಾರೆಂಬ ಸಂಗತಿಯನ್ನು ದೂತರು ವರದಿಮಾಡಿದರು. ಅಮಾತ್ಯನು ಇನ್ನು ಒಂದೆರಡು ದಿನಗಳಲ್ಲಿ ಉಭಯ ಸೇನೆಗಳಿಗೂ ಯುದ್ಧ ಪ್ರಾಪ್ತವಾಗ ಬಹುದೆಂದು ತಿಳಿದು, ಕಾಲವಿಳಂಬ ಮಾಡದೆ ಪುರರಕ್ಷಣೆಗೆ ತಕ್ಕ ಏರ್ಪಾಡು ಮಾಡಿ ನಂದರ ಬಳಿಗೆ ಹೋದನು. ವೃದ್ಧನಾದ ಸರ್ವಾರ್ಥಸಿದ್ಧಿರಾಯನು ಅಮಾತ್ಯನ ಮೂಲಕ ಎಲ್ಲಾ ವಿಚಾರಗಳನ್ನೂ ತಿಳಿದು ನಂದರಿಗೆ ಸಂಧಿಮಾಡಿ ಕೊಳ್ಳುವಂತೆ ಸೂಚಿಸಿದನು. ನಂದರು ಸಂಧಿಗೊಪ್ಪದೆ ತಂದೆಗೆ ಸಮಾಧಾನ ಹೇಳಿ ಯುದ್ಧಮೂಲಕವಾಗಿಯೇ ಶತ್ರುವನ್ನು ನಿಗ್ರಹಿಸಬೇಕೆಂದು ನಿಶ್ಚಯಿ ಸಿದರು. ವಿಜಯಯಾತ್ರೆಗೆ ತೆರಳಲು ಪ್ರಶಸ್ತವಾದ ಮುಹೂರ್ತವನ್ನು ಜೋಯಿಸರಿಂದ ತಿಳಿದುಹೇಳಬೇಕೆಂದು ಅಮಾತ್ಯನಿಗೆ ತಿಳಿಸಿದರು. ಅಮಾತ್ಯನು ಅವರ ಅಪ್ಪಣೆ ಪಡೆದು ಯುದ್ಧಾಸಕ್ತನಾಗಿ ತೆರಳಿದನು. ನಂದರು ಅಂತಃಪುರ ವನ್ನು ಹೊಕ್ಕು ಮರುದಿನ ತಾವು ಯುದ್ಧರಂಗಕ್ಕೆ ಹೊರಡುವ ವಿಚಾರವನ್ನು ಪತ್ನಿಯರಿಗೆ ತಿಳಿಸಿ, ಅವರನ್ನು ಸಮಾಧಾನಗೊಳಿಸುತ್ತ ರಾತ್ರಿಯನ್ನು ಕಳೆದರು.

ಪರ್ವತರಾಜನೂ ನಂದರ ಸೈನ್ಯವು ಸಮೀಪವಾದುದರಿಂದ ಸೇನಾಪತಿ ಗಳಿಗೆ ಭಯಂಕರ ಸಮರಕ್ಕೆ ಸಿದ್ಧವಾಗಿರುವಂತೆ ಆಜ್ಞಾಪಿಸಿದನು. ಬೇರೆ ಮಾರ್ಗದಿಂದ ಪಾಟಲೀಪುರದ ಮುತ್ತಿಗೆಯನ್ನು ನಡೆಸುವ ಸನ್ನಾಹವನ್ನೂ ಮಾಡಿದನು.

ಅಮಾತ್ಯನು ಕ್ಷಪಣಕನನ್ನು ಬರಮಾಡಿಕೊಂಡು 'ನಾಳೆ ತುಲಾಲಗ್ನದಲ್ಲಿ ನಂದರಿಗೆ ವಿಜಯಪ್ರಯಾಣ ನಿಶ್ಚಿತವಾಗಿದೆ. ಲಗ್ನಬಲ ಹೇಗಿದೆ? ಎಂದು ಕೇಳಿದನು. ಜೀವಸಿದ್ಧಿಯು 'ಅಮಾತ್ಯಶ್ರೇಷ್ಠರೆ, ತುಲಾಲಗ್ನ ಅಷ್ಟು ಉತ್ತಮ ವಿಲ್ಲ. ವೃಶ್ಚಿಕ ಲಗ್ನವು ಬಹಳ ಪ್ರಶಸ್ತವಾಗಿದೆ. ಲಗ್ನಾಧಿಪತಿಯು ಶತ್ರು ಸ್ಥಾನವನ್ನು ನೋಡುತ್ತಿರುವುದರಿಂದ ಶತ್ರುಕ್ಷಯವು ನಿಶ್ಚಯವು.' ಎಂದು

ತಮ್ಮ ಕಾರ್ಯಸಿದ್ಧಿಗೆ ಅನುಕೂಲವಾದ ಲಗ್ನವನ್ನು ತಿಳಿಸಿದನು. ರಾಕ್ಷಸನು ಪುರೋಹಿತರಿಗೆ 'ಇವರು ಹೇಳಿದ ಲಗ್ನದಲ್ಲಿ ಅರಸುಗಳಿಗೆ ವಿಜಯಯಾತ್ರೆಯನ್ನು ಗೊತ್ತುಮಾಡಿ' ಎಂದು ತಿಳಿಸಿ ನಿದ್ರಾಸಕ್ತನಾಗಿ ತೆರಳಿದನು.

ಮಾರನೆಯ ದಿನ ನಂದರು ಬೇಗನೆ ಎದ್ದು ನಿತ್ಯಕರ್ಮಗಳನ್ನು ಮುಗಿಸಿದರು. ಮಾತಾಪಿತೃಗಳಿಗೆ ವಂದಿಸಿ ಅವರ ಆಶೀರ್ವಾದವನ್ನು ಪಡೆದು ವಂದಿಗಳು ಹೊಗಳುತ್ತಿರಲು ಸಕಲ ರಾಜಮರ್ಯಾದೆಗಳೊಡನೆ ಅಮಾತ್ಯ ಸಮೇತರಾಗಿ ಕ್ಷಪಣಕನು ಹೇಳಿದ ಲಗ್ನದಲ್ಲೇ ವಿಜಯಯಾತ್ರೆಗೆ ಹೊರಟರು. ಆಗ ಅವರ ಎಡಗಣ್ಣು ಮತ್ತು ಎಡಭುಜಗಳು ಅದುರಿದುವು. ಹದ್ದುಕಾಗೆಗಳು ಅವರ ಧ್ವಜಗಳ ಮೇಲೆ ಕುಳಿತವು. ಬಿರುಗಾಳಿ ಬೀಸಿ ಧೂಳು ಮುಸುಕಿತು. ಆ ಅಶುಭಸೂಚನೆಗಳನ್ನು ಅವರು ಲಕ್ಷಿಸದೆ ಯುದ್ಧಭೂಮಿಯ ಕಡೆ ನಡೆದರು. ಸ್ವಲ್ಪ ದೂರ ಬರಲು ಅಮಾತ್ಯನು ನಂದರನ್ನು ದಂಡಿನ ಪಾಳೆಯದಲ್ಲಿ ವಿಶೇಷ ರಕ್ಷಣೆಗಳಿಂದ ಕೂಡಿದ್ದ ಬಿಡಾರಕ್ಕೆ ದಯಮಾಡಿಸಬಹುದೆಂದು ಪ್ರಾರ್ಥಿಸಿ, ಪುರರಕ್ಷಣೆಯ ಏರ್ಪಾಡುಗಳನ್ನು ನೋಡಿಬರಲು ಆ ಕಡೆ ಹೋದನು.

ನಂದರು ಬರುತ್ತಾ ಸರಯೂ ತೀರದಲ್ಲಿ ದಕ್ಷಿಣದಿಕ್ಕಿನಲ್ಲಿ ರಚಿಸಿದ್ದ ಜಪಶಾಲೆಯನ್ನು ಕಂಡು ಅದೇನೆಂದು ಕೇಳಿದರು. ಅಮಾತ್ಯರ ಅಪ್ಪಣೆಯಂತೆ ಶತ್ರುಪಲಾಯನ ಜಪವನ್ನಾಚರಿಸುವ ಹೋಮಶಾಲೆಯೆಂದು ದೂತರು ವಿಜ್ಞಾಪಿಸಿದರು. ಅಷ್ಟರಲ್ಲಿ ಚಾಣಕ್ಯನು ತಿಳಿಸಿದ್ದಂತೆ ಮಾಸೋಪವಾಸಿಯು ಶಿಷ್ಯರೊಡಗೂಡಿ ಫಲಮಂತ್ರಾಕ್ಷತೆಗಳೊಡನೆ ಬಂದು ನಂದರನ್ನು ಕಂಡು ಶತ್ರುನಿಗ್ರಹಾರ್ಥವಾಗಿ ತಾವು ಆಚರಿಸುತ್ತಿರುವ ಜಪಹೋಮಗಳನ್ನು ವಿವರಿಸಿದನು. ನಂದರು ಅದನ್ನು ಕೇಳಿ ಹರ್ಷಿತರಾದರು. ಮಹಾಮುನಿಗಳ ಮಾತಿನಲ್ಲಿ ಅವರಿಗೆ ಪೂರ್ಣ ನಂಬಿಕೆಯುಂಟಾಯಿತು. ಇದೇ ಸಮಯವೆಂದು ಮಾಸೋಪವಾಸಿಯು 'ಭೂಪತಿಗಳೆ, ಹೋಮಕಾರ್ಯವು ಶುಕ್ರವಾರ ಪ್ರದೋಷಕಾಲಕ್ಕೆ ಸಮಾಪ್ತವಾಗುವುದು. ಹೋಮದ ಕಡೆಯಲ್ಲಿ ಪೂರ್ಣಾಹುತಿಯನ್ನು ಕೊಡಲಾಗುವುದು. ಆ ಸಮಯದಲ್ಲಿ ಸುಗಂಧಯುಕ್ತವಾದ ತಂಗಾಳಿಯುಂಟಾಗಿ ಎಲ್ಲರೂ ನೋಡುವಂತೆ ಮಹಾಪ್ರಭಾಮಂಡಲ ಉದಯಿಸುವುದು. ಬಳಿಕ ಅಗ್ನಿಕುಂಡದಿಂದ ದೇವತಾಹಸ್ತವು ಕಾಣಿಸಿಕೊಂಡು ಪೂರ್ಣಾಹುತಿಯನ್ನು ತಾನೇ

ಸ್ವೀಕರಿಸುವುದು. ಆ ದರ್ಶನ ಭಾಗ್ಯವು ಸುಕೃತಿಗಳಿಗೆ ಮಾತ್ರ ಲಭ್ಯವಾಗುವುದಲ್ಲದೆ ಅನ್ಯರಿಗೆ ದೊರಕದು' ಎಂದು ಹೇಳಿದನು.

ನಂದರು ಕುತೂಹಲ ಹೊಂದಿದವರಾಗಿ 'ಆ ದೇವತಾಹಸ್ತ ದರ್ಶನಕ್ಕೆ ನಾವು ಬರಬಹುದೆ?' ಎಂದು ಕೇಳಲು ಮಾಸೋಪವಾಸಿಯು 'ಅಗತ್ಯವಾಗಿ ಬರಬಹುದು. ದರ್ಶನಭಾಗ್ಯವನ್ನು ಪಡೆದು ಪ್ರಸಾದ ಸ್ವೀಕರಿಸಬಹುದು. ತಮ್ಮನ್ನು ಆಹ್ವಾನಿಸುವುದಕ್ಕಾಗಿಯೇ ನಾವು ಇಲ್ಲಿಗೆ ಬಂದುದು. ಇದರ ಫಲವಾಗಿ ಶತ್ರುಸೇನೆ ನಾಶವಾಗುವುದು. ಈ ದರ್ಶನಕ್ಕೆ ಉತ್ತಮವರ್ಣದವರಲ್ಲದೆ ಅನ್ಯರು ಇಲ್ಲಿಗೆ ಪ್ರವೇಶಿಸಕೂಡದು. ಅವರು ಈ ಜಪಶಾಲೆಯ ಬಳಿಯೇ ಸುಳಿಯಕೂಡದು. ಅದಕ್ಕಾಗಿ ಆ ದಿನ ತಮ್ಮ ಸೇನಾಪರಿವಾರವೆಲ್ಲಾ ದೂರದಲ್ಲೇ ಇರಬೇಕಾಗುವುದು. ತಾವು ಮಾತ್ರ ಪ್ರವೇಶಿಸಿದರೆ ಅದರಿಂದ ತಮಗೇ ಶ್ರೇಯಸ್ಸು ದೊರಕುವುದು.' ಎಂದು ತಿಳಿಸಲು, ನಂದರು ಅದಕ್ಕೆ ಸಮ್ಮತಿಸಿ ಪೂರ್ಣಾಹುತಿಯ ಸಮಯವನ್ನುತಮಗೆ ಜ್ಞಾಪಿಸಬೇಕೆಂದು ಹೇಳಿ ಬಿಡಾರಕ್ಕೆ ಹೋದರು.

ಉಭಯ ಸೇನೆಗಳಿಗೂ ಯುದ್ಧವು ಕೈಗಟ್ಟಿತು. ರಾಕ್ಷಸನ ಸಾಹಸದಿಂದ ನಂದಪಡೆಗೆ ಮೊದಲುಮೊದಲು ಜಯ ತೋರಿತು. ತಮ್ಮದೇ ಮೇಲ್ಗೈ ಆಗಿರುವುದನ್ನು ಕೇಳಿ ನಂದರು ಆನಂದಭರಿತರಾದರು. ದಾಶಾರ್ಣ ಶೂರ ಸೇನಾಧಿಪತಿಗಳು ಶಾಹುರೀನಗರದ ಮುತ್ತಿಗೆಯನ್ನು ಕೈಕೊಂಡ ಸಮಾಚಾರವೂ ಬಂದಿತು. ಪರ್ವತರಾಜನು ಅದನ್ನು ಕೇಳಿ ಕಳವಳಗೊಂಡನು. ಇಲ್ಲಿಯೂ ಅವನಿಗೆ ಜಯವು ಅನಿಶ್ಚಿತವಾಗಿ ತೋರಿತು. ಅದೇ ವೇಳೆಯಲ್ಲಿ ಉಪಾಯ ಚತುರನಾದ ಅಮಾತ್ಯರಾಕ್ಷಸನು ವಿಷ್ಣುದಾಸನೆಂಬ ನಿಯೋಗಿಯ ಮೂಲಕ ಪತ್ರವೊಂದನ್ನು ಕಳುಹಿಸಿದನು. ಅದರಲ್ಲಿ ಚಂದ್ರಗುಪ್ತನನ್ನು ನಂದರಿಗೊಪ್ಪಿಸಿ ಅವರ ಸ್ನೇಹವನ್ನು ಬಯಸುವುದಾದರೆ ಅದರಿಂದ ಅವನಿಗೆ ಹೆಚ್ಚಿನ ಲಾಭವುಂಟೆಂದು ಬರೆದಿದ್ದಿತು. ಇವೆಲ್ಲ ಕಾರಣಗಳಿಂದ ಪರ್ವತರಾಜನ ಮನಸ್ಸು ಕದಡಿತು. ಚಂದ್ರಗುಪ್ತನನ್ನು ನಂದರಿಗೊಪ್ಪಿಸಿ ಹಿಂದಿರುಗುವುದೇ ಲೇಸೆಂದು ಭಾವಿಸಿ ಮಂತ್ರಿ ಸೇನಾಪತಿಗಳ ಅಭಿಮತವನ್ನು ಕೇಳಿದನು. ಆದರೆ ಅದಕ್ಕೆ ಯಾರಿಂದಲೂ ಬೆಂಬಲ ದೊರಕಲಿಲ್ಲ.

ಆ ಸಂಗತಿಯು ಚಾಣಕ್ಯನಿಗೆ ಗೊತ್ತಾಯಿತು. ಪರ್ವತೇಶ್ವರನ

ದುರ್ಬುದ್ಧಿಗಾಗಿ ಅವನಿಗೆ ಕೋಪವುಂಟಾಯಿತು. ಆದರೂ ಮುಳಿಸನ್ನು ತೋರ್ಪಡಿಸದೆ 'ನಂದರು ಬಲಹೀನರಾಗಿರುವುದರಿಂದಲೇ ಸಂಧಿಯನ್ನು ಬಯಸಿದ್ದಾರೆ. ರಾಕ್ಷಸನ ಕಪಟಕ್ಕೆ ಮರುಳಾಗಬಾರದು. ಬೇಗನೆ ಶುಭ ವಾರ್ತೆಗಳನ್ನು ನೀನೇ ಕೇಳುವೆ. ನಾಳೆ ಶೇಖರ ಸೇನಾಪತಿಗೆ ಸರ್ವಸೇನಾಧಿಪತ್ಯವನ್ನು ಕೊಟ್ಟು ನನ್ನ ಬಳಿಗೆ ಕಳುಹಿಸು. ಅದರ ಪರಿಣಾಮವೇನೆಂಬುದನ್ನು ನಿರೀಕ್ಷಿಸುತ್ತಿರು. ಈಗ ಧೈರ್ಯಗೆಡುವುದು ಯುಕ್ತವಲ್ಲ' ಎಂದು ಪರ್ವತ ರಾಜನಿಗೆ ಧೈರ್ಯಹೇಳಿ ಚಾಣಕ್ಯನು ತನ್ನ ಬಿಡಾರಕ್ಕೆ ತೆರಳಿದನು.

## ವಿಧಿವಿಲಾಸ

ಪರ್ವತರಾಜನು ಶೇಖರನಿಗೆ ಸರ್ವಸೇನಾಧಿಪತ್ಯವನ್ನು ವಹಿಸಿಕೊಟ್ಟು ಚಾಣಕ್ಯನ ಬಳಿಗೆ ಕಳುಹಿಸಿದನು. ಆಗ ಚಾಣಕ್ಯನು 'ಸರ್ವಸೇನಾಪತಿಯೆ, ಮಲಯಕೇತುವಿನ ರೂಪದ ಹೋಲಿಕೆಯುಳ್ಳ ವಿವೇಕಿಯಾದ ಒಬ್ಬ ಪುರುಷನಿಗೆ ರಾಜಯೋಗ್ಯವಾದ ವಸ್ತ್ರಭೂಷಣಗಳಿಂದಲಂಕರಿಸಿ ಗಜಾರೋಹಣ ಮಾಡಿಸಿ ಕಾಶೀಮಾರ್ಗದಲ್ಲಿ ಇಳಿದಿರುವ ನಿನ್ನ ಸೇನಾಭಾಗಕ್ಕೆ ಈ ರಾತ್ರಿಯೇ ಕಳುಹಿಸು' ಎಂದು ಹೇಳಲು, ಶೇಖರನು ಅದೇ ರೀತಿ ಮಾಡಿದನು. ನಂದರು ಜಪಶಾಲೆಗೆ ಬಂದ ಸಮಾಚಾರವನ್ನು ಆ ಸೇನೆಗೆ ತಿಳಿಸುವುದಕ್ಕೂ ಉಳಿದ ಕೆಲಸಗಳು ಹೇಗೆ ಹೇಗೆ ನಡೆಯಬೇಕೆಂಬುದಕ್ಕೂ ತಕ್ಕ ಅಶ್ವಾರೋಹಿಗಳನ್ನು ನೇಮಿಸಲಾಯಿತು. ಅವರು ಬಂದೊಡನೆ ಸಿದ್ಧವಾಗಿರುವ ಸೈನ್ಯವು ಹೇಗೆ ನಡೆಯಬೇಕೆಂಬುದನ್ನು ರಹಸ್ಯವಾಗಿ ತಿಳಿಸಿದನು. ಶೇಖರನು ಚಾಣಕ್ಯನ ಅಭಿಪ್ರಾಯವನ್ನು ಚೆನ್ನಾಗಿ ಗ್ರಹಿಸಿ ಮುಂದಿನ ಕಾರ್ಯಕ್ಕಾಗಿ ತೆರಳಿದನು.

ಮಾಸೋಪವಾಸಿಯ ಶಿಷ್ಯರು ನಂದರ ಬಳಿಗೆ ಬಂದು 'ಪ್ರಭುಗಳೆ, ಇಂದು ಶುಕ್ರವಾರವಾದ್ದರಿಂದ ಹೋಮಕಾರ್ಯವು ಸಮಾಪ್ತವಾಗುತ್ತದೆ. ಪೂರ್ಣಾಹುತಿಯ ಸಮಯದಲ್ಲಿ ಉಂಟಾಗುವ ದೇವತಾಹಸ್ತದರ್ಶನಕ್ಕೆ ತಾವೆಲ್ಲರೂ ಜಾಗ್ರತೆ ದಯಮಾಡಿಸಬೇಕೆಂದು ತಿಳಿಸಲು ಗುರುಗಳು ನಮ್ಮನ್ನು ಕಳುಹಿಸಿದ್ದಾರೆ' ಎಂದು ನುಡಿದರು ನಂದರು ಸಂತೋಷಗೊಂಡು ರಾಕ್ಷಸನ ಸಮಯವೇನೆಂದು ವಿಚಾರಿಸಿದರು. ರಾಕ್ಷಸನು ಕಳೆದೆರಡು ದಿನಗಳಿಂದ ನಿದ್ರೆ

ಯಿಲ್ಲದೆ ಈಗ ನಿದ್ರಿತನಾಗಿದ್ದಾನೆಂದು ತಿಳಿದು ನಿದ್ರಾಭಂಗವನ್ನುಂಟು ಮಾಡಲು ಇಷ್ಟಪಡದೆ ವಸ್ತ್ರಭೂಷಣಗಳಿಂದಲಂಕೃತರಾಗಿ ಜಪಶಾಲೆಗೆ ಹೊರಟರು. ಆಗ ವೈಗಾವಲಿನ ಪಡೆಯು ಅವರನ್ನು ಅನುಸರಿಸಲು ಅವರಿಂದ ಪವಿತ್ರವಾದ ಹೋಮಕಾರ್ಯವು ಅಪವಿತ್ರವಾಗಬಹುದೆಂದೆಣಿಸಿ ಅವರನ್ನು ಸಂಗಡ ಕರೆದುಕೊಳ್ಳದೆ ಮಿತಪರಿವಾರದೊಡನೆ ಅಶ್ವಾರೋಹಿಗಳಾಗಿ ಜಪಶಾಲೆಯ ಕಡೆಗೆ ಹೊರಟರು. ಜಪಶಾಲೆಯ ಬಳಿ ಬಂದಿಳಿಯಲು ಚಾಣಕ್ಯನಿಂದ ನಿಯುಕ್ತರಾಗಿದ್ದ ದೂತರು ಆ ಸಮಾಚಾರವನ್ನು ಕಾಶೀಮಾರ್ಗದಲ್ಲಿದ್ದ ಸೇನೆಗೂ ಶೇಖರಸೇನಾಪತಿಗೂ ಚಾಣಕ್ಯನಿಗೂ ತಿಳಿಸಿದರು. ಆಗ ಕಾಶೀಮಾರ್ಗದಲ್ಲಿ ಫಿರಂಗಿಗಳ ಸದ್ದು ಕೇಳಿಸಿತು. ನಂದರು ಕಾಶೀರಾಜನ ಸೈನ್ಯಕ್ಕೂ ಪರ್ವತರಾಜನ ಸೈನ್ಯಕ್ಕೂ ಯುದ್ಧವಾಗುತ್ತಿರಬಹುದೆಂದು ತಿಳಿದು ಹೋಮಕುಂಡವನ್ನು ಸುತ್ತಿಬರುತ್ತಿದ್ದರು.

ಅಷ್ಟರಲ್ಲಿ ಕಾಶೀರಾಜನ ದೂತರಂತೆ ವೇಷಧರಿಸಿ ಇಬ್ಬರು ಕುದುರೆ ಸವಾರರು 'ನಂದಭೂಪತಿಗಳಿಗೆ ವಿಜಯವಾಗಲಿ' ಎಂದು ಘೋಷಿಸುತ್ತ ನಂದರನ್ನು ಕಾಣಲು ಅವಸರದಿಂದ ಬಂದರು. ಅವರು ನಿರಾಯುಧರಾಗಿದ್ದುದರಿಂದಲೂ ಮಿತ್ರನಾದ ಕಾಶೀರಾಜನ ದೂತರೆಂಬ ಕಾರಣದಿಂದಲೂ ಅವರನ್ನು ಕಾವಲುಗಾರರು ಯಾರೂ ತಡೆಯಲಿಲ್ಲ. ನಂದರು ಸಮಾಚಾರವೇನೆಂದು ತಿಳಿಯಲು ಜಪಶಾಲೆಯಿಂದ ಹೊರಗೆ ಬಂದರು. ಆ ದೂತರು ಕೈಮುಗಿದು 'ಪ್ರಭುವರ್ಯರೆ, ಕಾಶೀರಾಜನು ತಮ್ಮನ್ನು ಎದುರುಗೊಳ್ಳಲು ಬಂದ ಮಲಯಕೇತುವನ್ನು ಸೆರೆಹಿಡಿದು ಅಂದಣದಲ್ಲಿ ಕೂಡಿಸಿ ಶತ್ರುಗಳು ಬಂದರೂ ಬರಬಹುದೆಂದು ಬೇಗನೆ ತಕ್ಕಷ್ಟು ಸೇನೆಯನ್ನು ಜೊತೆಮಾಡಿ ಇಲ್ಲಿಗೆ ಕಳುಹಿಸಿದ್ದಾರೆ. ನಾವು ಈ ಸಂತೋಷದ ಸಂಗತಿಯನ್ನು ತಮಗೆ ತಿಳಿಸಬೇಕೆಂದು ಮುಂದಾಗಿ ಬಂದೆವು.' ಎಂದು ವಿಜ್ಞಾಪಿಸಿಕೊಂಡರು.

ನಂದರು ಅತ್ಯಂತ ಆನಂದದಿಂದ ಸಮಾಚಾರವನ್ನು ತಂದ ದೂತರಿಗೆ ವಸ್ತ್ರಾಭರಣಗಳ ಉಡುಗೊರೆಯನ್ನು ಕೊಟ್ಟು ಗೌರವಿಸುವಂತೆ ಆಜ್ಞೆಮಾಡಿ, ಕಾಶೀರಾಜನ ಸಹಾಯಕ್ಕಾಗಿ ಭದ್ರಭಟಾದಿ ಸೇನಾನಾಯಕರು ತಮ್ಮ ಸೇನೆಗಳೊಡನೆ ಆ ಕಡೆ ತೆರಳಬೇಕೆಂದು ಅವರಿಗೆ ಹೇಳಿಕಳುಹಿಸಿದರು. ಫಿರಂಗಿಗಳ

ಶಬ್ದವೇನೆಂದು ನಂದರು ದೂತರನ್ನು ಪ್ರಶ್ನಿಸಿದಾಗ ಅವರು ಮಲಯಕೇತುವು ಸೆರೆ ಸಿಕ್ಕಿದ ಸಂತೋಷಕ್ಕಾಗಿ ಹಾರಿಸಿದರೆಂದು ಹೇಳಿದರು.

ಸ್ವಲ್ಪ ಹೊತ್ತಿನಲ್ಲಿ ಕಪಟ ಮಲಯಕೇತುವನ್ನು ಪಾಲಕಿಯಲ್ಲಿ ಕುಳ್ಳಿರಿಸಿ ಮುಸುಕುಹಾಕಿ ಕಾಲ್ಬಲದವರು ಅದನ್ನು ಹೊತ್ತುಕೊಂಡು ನಂದರಿದ್ದ ಕಡೆಗೆ ಬರುತ್ತಿದ್ದರು. ಬಹುಸಂಖ್ಯೆಯ ರಾವುತರು ಖಡ್ಗ ಹಿಡಿದು ಪಾಲಕಿಯನ್ನು ಅನುಸರಿಸಿ ಬರುತ್ತಿದ್ದರು. ನಂದರ ಕಡೆಯ ಕಾವಲುಪಡೆಯುವರು ಅವರೆಲ್ಲರೂ ಕಾಶೀರಾಜನ ಕಡೆಯವರೆಂದು ಅವರನ್ನು ತಡೆಯಲಿಲ್ಲ. ನಂದರು ಮಲಯ ಕೇತುವನ್ನು ನೋಡುವ ಕುತೂಹಲದಿಂದ ಅಂದಣದ ಬಳಿಗೆ ಬಂದು ಮಲಯ ಕೇತುವನ್ನು ಹಂಗಿಸಿ ಬುದ್ಧಿವಾದ ಹೇಳಲುಪಕ್ರಮಿಸಿದರು. ಒಳಗಿದ್ದ ಕೃತಕ ಮಲಯಕೇತುವು ಮುಸುಕು ತೆಗೆದು ಖಡ್ಗವನ್ನು ಹಿಡಿದು ಹೊರಗೆ ಬಂದನು. ಅವನೊಡನೆ ಬಂದಿದ್ದ ಸೈನಿಕರು ನಂದರನ್ನು ಸುತ್ತುಗಟ್ಟಿ ನಿಂತರು. ಆಗ ನಂದರಿಗೆ ಇದೇನೋ ಮೋಸವಿರಬೇಕೆಂದು ಹೊಳೆಯಿತು. ಕೂಡಲೆ ಅವರು ಧೈರ್ಯತಂದುಕೊಂಡು ಪರಿಜನರ ಕೈಲಿದ್ದ ಕತ್ತಿಗಳನ್ನು ಸೆಳೆದುಕೊಂಡು ಕುದುರೆ ಗಳನ್ನೇರಲು ಪ್ರಯತ್ನಿಸಿದರು. ಶತ್ರುಸೈನಿಕರು ಅದಕ್ಕೆ ಅವಕಾಶವೀಯದೆ ನಂದರ ಕುದುರೆಗಳ ಕಾಲುಗಳನ್ನು ಕತ್ತರಿಸಿ ಜಪಶಾಲೆಗೆ ನುಗ್ಗಿ ಅದಕ್ಕೆ ಬೆಂಕಿ ಹೊತ್ತಿಸಿದರು. ಚಾಣಕ್ಯನಿಂದ ನೇಮಿತರಾಗಿದ್ದ ಅಶ್ವಾರೋಹಿಗಳು ಜಪ ಶಾಲೆಯು ಹತ್ತಿ ಉರಿಯುವುದನ್ನು ಕಂಡು ತ್ವರಿತವಾಗಿ ಬಂದು ಶೇಖರನಿಗೆ ಸಂಗತಿ ತಿಳಿಸಿದರು. ಶೇಖರನು ಸಿದ್ಧವಾಗಿ ನಿಲ್ಲಿಸಿದ್ದ ಸೈನ್ಯಕ್ಕೆ ನಂದರ ಮೇಲೆ ಧಾವಿಸುವಂತೆ ಆಜ್ಞೆಯಿತ್ತನು. ಯಾವ ಕಡೆಯಿಂದಲೂ ನಂದರಿಗೆ ಸಹಾಯ ದೊರೆಯದಂತೆ ಸೇನೆಯನ್ನು ನಾಲ್ಕು ದಿಕ್ಕಿಗೂ ನಿಲ್ಲಿಸಿ ಚಂದ್ರಗುಪ್ತನೊಡನೆ ತಾನೂ ಜಪಶಾಲೆಯ ಕಡೆ ವಾಹನಾರೂಢನಾಗಿ ಹೊರಟನು.

ತಮ್ಮ ದುಷ್ಕರ್ಮದಿಂದ ತಮಗೆ ವಿಪತ್ತು ಸಂಭವಿಸಿತೆಂಬುದು ನಂದರಿಗೆ ಆಗ ಅರಿವಾಯಿತು. ಚಾಣಕ್ಯನ ತಂತ್ರದಿಂದ ಅವರು ತಮ್ಮ ಸೇನೆಯಿಂದ ಬೇರ್ಪಟ್ಟಿದ್ದರು. ಅಮಾತ್ಯನೂ ಅವರ ಸಹಾಯಕ್ಕೆ ಇಲ್ಲವಾದನು. ಭದ್ರ ಭಟಾದಿಗಳ ಸೈನ್ಯ ಕಾಶೀಮಾರ್ಗವಾಗಿ ತೆರಳಿತ್ತು. ಮೃಗಾವಲಿನ ಪಡೆ ಬಿಡಾರದ ಬಳಿಯೇ ಉಳಿದಿತ್ತು. ಅವರು ನಿಸ್ಸಹಾಯಕರಾಗಿ ಭಯಗ್ರಸ್ಥ ರಾದರು. ಆದರೂ ಕ್ಷಾತ್ರಧರ್ಮದಂತೆ ಅವರು ಖಡ್ಗವನ್ನು ಹಿಡಿದು ಶತ್ರು

ಪಕ್ಷದವರ ಮೇಲೆ ನುಗ್ಗಿ ಭಯಂಕರವಾಗಿ ಯುದ್ಧಮಾಡಿದರು. ಶತ್ರುಸೇನೆ ಭಯಗೊಂಡು ದಿಕ್ಕುದಿಕ್ಕಿಗೆ ಓಡಿತು. ಅನೇಕರು ಅವರ ನಿಶಿತ ಖಡ್ಗಗಳಿಗೆ ಆಹುತಿಯಾದರು. ಜ್ಯೇಷ್ಠನಂದನು ಕಪಟಮಲಯಕೇತುವನ್ನು ಸಂಹರಿಸಿದನು. ಅಷ್ಟರಲ್ಲಿ ಶೇಖರನ ಸೇನೆ ನಂದರನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿತು. ಜ್ಯೇಷ್ಠನಂದನಿಗೂ ಶಬರವರ್ಮನಿಗೂ ನಡೆದ ಮಹಾಯುದ್ಧದಲ್ಲಿ ನಂದನು ಅಸಮಾನ ಸಾಹಸದಿಂದ ಹೋರಾಡಿ ಕಡೆಗೆ ಅವನ ಕತ್ತನ್ನು ಕತ್ತರಿಸಿದನು.

ಅದನ್ನು ಕಂಡು ಚಂದ್ರಗುಪ್ತನು ಕ್ರುದ್ಧನಾಗಿ ಅರ್ಧಚಂದ್ರ ಬಾಣವನ್ನು ಬಿಲ್ಲಿಗೆ ಹೂಡಿ ಆಕರ್ಣಾಂತವಾಗಿ ಸೆಳೆದು ಪ್ರಯೋಗಿಸಿ ಜ್ಯೇಷ್ಠನಂದನ ಖಡ್ಗ ಸಮೇತವಾದ ಹಸ್ತವನ್ನು ಕತ್ತರಿಸಿದನು. ಭಾರವಾದ ಭಲ್ಲೆಯವನ್ನು ಅವನ ಎದೆಗೆ ಗುರಿಯಿಟ್ಟು ಎಸೆಯಲು ಅದು ಅವನ ಹೃದಯವನ್ನು ಭೇದಿಸಿತು. ವಜ್ರಪ್ರಹಾರದಿಂದ ಧರಣಿಗೆ ಉರುಳುವ ಗಿರಿಶಿಖರದಂತೆ ಅವನು ನೆಲದಲ್ಲಿ ಬಿದ್ದು ಗತಪ್ರಾಣನಾದನು. ಸೋದರಮಾವನಾದ ಶಬರವರ್ಮನ ಮರಣದಿಂದ ಕುಪಿತನಾದ ಶೇಖರನು ಉಪನಂದನ ಶಿರಸ್ಸನ್ನು ಛೇದಿಸಿದನು. ಚಿತ್ರವರ್ಮನು ಕನಿಷ್ಠನಂದನನ್ನೂ, ವಿನಂದನನ್ನೂ ಕೊಂದನು. ಸಿಂಧುಷೇಣನು ಲೋಕ ನಂದನನ್ನು ಇರಿದು ಕೊಂದನು. ಕುರುನಂದನು ಮೇಘನಾದನಿಂದ ಹತ ನಾದನು. ಪುಷ್ಕರಾಕ್ಷನು ಅನುನಂದನ ಅಸುವನ್ನು ಅಪಹರಿಸಿದನು. ಚಾಣಕ್ಯನ ಸೂಚನೆಯಂತೆ ಶೇಖರನು ಪಾಶಗಳನ್ನು ಬೀಸಿ ಉಳಿದ ಮೂವರು ನಂದರನ್ನು ಬಂಧಿಸಿ ಕಾಲುಗಳಿಗೆ ಹಗ್ಗ ಜೀರಿ ಎಳೆಸಿ ಕೊಲ್ಲಿಸಿದನು. ಈ ರೀತಿಯಲ್ಲಿ ನವನಂದರೂ ಹತರಾದರು. ಚಾಣಕ್ಯನು ಅವರ ಶಿರಸ್ಸುಗಳನ್ನು ಅವರವರ ಪತ್ನಿಯರಿಗೆ ತಲುಪುವಂತೆ ಮಾಡಿ ಅವರ ಮುಂಡಗಳನ್ನು ಎಳೆಸಿ ಜಪಶಾಲೆಯ ಅಗ್ನಿಯಲ್ಲಿ ಹಾಕಿಸಿದನು. ಯುದ್ಧ ನಡೆಯುತ್ತಿದ್ದಾಗ ದೂತರು ಓಡಿಹೋಗಿ ಅಮಾತ್ಯರಾಕ್ಷಸನನ್ನು ಎಚ್ಚರಗೊಳಿಸಿ ನಂದರು ವಿಪತ್ತಿಗೆ ಗುರಿಯಾಗಿರುವ ಸಂಗತಿಯನ್ನು ಅರಿಕೆಮಾಡಿದರು. ಅಮಾತ್ಯನು ಶತ್ರುಗಳ ಕಪಟದಿಂದ ನಂದರ ಗತಿ ಏನಾಯಿತೋ ಎಂದು ಕಳವಳಗೊಂಡು ತುರಗವನ್ನೇರಿ ಆಯುಧಪಾಣಿ ಯಾಗಿ ಜಪಶಾಲೆಯ ಕಡೆಗೆ ಧಾವಿಸುತ್ತಿರಲು ಶತ್ರುಗಳ ಜಯಭೇರೀ ಶಬ್ದವೂ ಕೋಲಾಹಲವೂ ಕೇಳಿಸಿದುವು. ಅಷ್ಟರಲ್ಲಿ ದೂತರು ಬಂದು ನಂದರೆಲ್ಲಾ ಹತ ರಾದ ಸಂಗತಿಯನ್ನು ತಿಳಿಸಿದರು. ಆ ಮರಣವಾರ್ತೆಯನ್ನು ಕೇಳಿ ರಾಕ್ಷಸನು

ಕಣ್ಣೀರಿಟ್ಟನು. ಬಹು ಕ್ಲೇಶಕ್ಕೊಳಗಾಗಿ ಏನೂ ತೋಚದೆ ಗ್ರಹಹಿಡಿದವನಂತೆ ಸ್ತಬ್ಧನಾಗಿ ನಿಂತನು. ಮುಂದೆ ನುಗ್ಗಿ ಶತ್ರುಗಳೊಡನೆ ಹೋರಾಡಿ ತಾನೂ ಪ್ರಾಣವನ್ನರ್ಪಿಸುವುದೆ? ಅಥವಾ ಕಪಟಮಾರ್ಗದಿಂದ ವೈರಿಗಳನ್ನು ನಿಗ್ರಹಿಸಲು ಹಿಂದಿರುಗುವುದೆ? ಹೀಗೆ ಅವನ ಮನಸ್ಸು ಇಬ್ಬಗೆಯಾಯಿತು. ಆಗ ಆತನ ಆಪ್ತಮಿತ್ರನೊಬ್ಬನು ಅಲ್ಲಿಗೆ ಬಂದು ಅಮಾತ್ಯನು ದುಡುಕುವುದು ಅಪಾಯಕಾರಿಯೆಂದು ಹೇಳಿ ಅವನನ್ನು ತಡೆದು ಹಿಂದಿರುಗುವಂತೆ ಮಾಡಿದನು.

ಪರ್ವತರಾಜನ ಸೇನೆಯಲ್ಲಿ ವಿಜಯ ವಾದ್ಯಗಳು ಭೋರ್ಗರೆದುವು. ಭಟರು ಸಿಂಹನಾದ ಮಾಡುತ್ತ ಸಂತಸದಿಂದ ಕುಣಿದಾಡಿದರು. ಪರ್ವತ ರಾಜನು ಆನಂದಪರವಶನಾದನು. ಚಾಣಕ್ಯನು ಗಂಗೆಯಲ್ಲಿ ಸ್ನಾನಮಾಡಿ ತನ್ನ ಪ್ರತಿಜ್ಞೆಯು ನೆರವೇರಿತೆಂಬ ಹರ್ಷದಿಂದ ಬಿಚ್ಚಿದ ತನ್ನ ಶಿಖೆಯನ್ನು ಗಂಟುಹಾಕಿದನು. ಚಂದ್ರಗುಪ್ತನೂ ಗಂಗಾಸ್ನಾನಮಾಡಿ ಸತ್ತವರಿಗೆ ತಿಲೋದಕವನ್ನು ಕೊಟ್ಟು ಚಾಣಕ್ಯನೊಡನೆ ಬಿಡಾರಕ್ಕೆ ಬಂದನು.

ನಂದರು ಮಡಿದ ವಾರ್ತೆ ಅರಮನೆಗೆ ಮುಟ್ಟಲು ಅದನ್ನು ಕೇಳಿ ಸರ್ವಾರ್ಥಸಿದ್ಧಿರಾಯನೂ ಸುನಂದಾದೇವಿಯೂ ಮೂರ್ಛಿತರಾದರು. ನಂದ ಪತ್ನಿಯರ ಆಕ್ರಂದನ ಧ್ವನಿಯು ಹೃದಯವಿದ್ರಾವಕವಾಗಿತ್ತು. ಅದನ್ನು ಕೇಳಿ ಬಾಗುರಾಯಣನು ಅರಮನೆಯನ್ನು ಹೊಕ್ಕು ಪುತ್ರಶೋಕದಿಂದ ಪ್ರಜ್ಞೆ ತಪ್ಪಿ ಬಿದ್ದಿದ್ದ ಮಹಾರಾಜನನ್ನು ಶೈತ್ಯೋಪಚಾರದಿಂದ ಉಪಚರಿಸಿ ಜ್ಞಾನ ಬರುವಂತೆ ಮಾಡಿದನು. ಸುನಂದಾದೇವಿಯೂ ಅಂತಃಪುರದ ಸ್ತ್ರೀಜನರ ಶೈತ್ಯೋಪಚಾರದಿಂದ ಮೂರ್ಛೆ ತಿಳಿದೆದ್ದಳು. ಬಾಗುರಾಯಣನು ಬಗೆಬಗೆಯಲ್ಲಿ ಅವರನ್ನು ಸಂತೈಸಿದನು. ನಂದಪತ್ನಿಯರ ಶೋಕವನ್ನು ಶಮನಗೊಳಿಸುವುದು ಅಸಾಧ್ಯವಾಯಿತು. ಅಷ್ಟರಲ್ಲಿ ಅಮಾತ್ಯನೂ ಅಲ್ಲಿಗೆ ಬಂದನು. ಸ್ತ್ರೀಜನರ ಪ್ರಲಾಪವನ್ನು ಕೇಳಿ ಅಲ್ಲಿ ನಿಲ್ಲಲಾರದೆ ವೃದ್ಧರಾಜರಾಣಿಯರ ಬಳಿಗೆ ಬಂದು ಅವರನ್ನು ಹಲವು ಬಗೆಗಳಿಂದ ಸಮಾಧಾನಪಡಿಸಿದನು. ತಾನು ಪುರವನ್ನು ತ್ಯಜಿಸುವುದು ಖಂಡಿತವೆಂದೂ ಆದರಿಂದ ವೃದ್ಧಮಹಾರಾಜರು ಸದ್ಯದಲ್ಲಿ ಚಂದ್ರಗುಪ್ತನನ್ನನುಸರಿಸಿ ನಡೆಯುವುದೇ ಕ್ಷೇಮವೆಂದೂ ಅವರನ್ನು ಪ್ರಾರ್ಥಿಸಿ ಕೊಂಡನು. ಶತ್ರುಗಳು ಬಂದು ಪಟ್ಟಣವನ್ನು ಹಾಳುಮಾಡದಂತೆ ಯುದ್ಧ

ವನ್ನು ನಿಲ್ಲಿಸಿ, ಚಂದ್ರಗುಪ್ತನಿಗೆ ಬೀಗಮುದ್ರೆಗಳನ್ನು ಒಪ್ಪಿಸಿ ಅವನು ನಿರಾತಂಕವಾಗಿ ಪುರಪ್ರವೇಶ ಮಾಡುವಂತೆ ಮಾಡುವುದೇ ಲೇಸೆಂದು ಬಾಗುರಾಯಣನಿಗೆ ತಿಳಿಸಿ ಅಲ್ಲಿಂದ ತನ್ನ ಮನೆಗೆ ತೆರಳಿದನು.

ಬಾಗುರಾಯಣನ ಅನುಮತಿಯಂತೆ ಅವನ ತಮ್ಮನಾದ ವತ್ಸಲಾಯನನೂ ಕೋಶಾಧಿಕಾರಿಯಾದ ರುಕ್ಮನೂ ಚಂದ್ರಗುಪ್ತನನ್ನು ಕಂಡು ಬೀಗಮುದ್ರೆಗಳನ್ನು ಅವನ ಮುಂದಿಟ್ಟು 'ಪ್ರಭು, ಇನ್ನು ಯುದ್ಧವನ್ನು ನಿಲ್ಲಿಸಿರಿ. ಯಾವ ಆತಂಕವೂ ಇಲ್ಲದೆ ಈ ಪುರವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. ನಂದರಾಜ್ಯಲಕ್ಷ್ಮಿಯು ವರಣಮಾಲೆಯನ್ನು ಹಿಡಿದು ನಿಮ್ಮ ಆಗಮನವನ್ನು ಎದುರು ನೋಡುತ್ತಿರುವಳು.' ಎಂದು ವಿಜ್ಞಾಪಿಸಿಕೊಂಡರು. ಚಾಣಕ್ಯನು ದುಷ್ಟರಾದ ನಂದರು ನಾಶವಾಗಿ ಮುಂದೆ ಪ್ರಾಣಹಾನಿಯಿಲ್ಲದೆ ಚಂದ್ರಗುಪ್ತನಿಗೆ ರಾಜ್ಯಲಾಭವಾದುದಕ್ಕಾಗಿ ಸಂತೋಷಪಟ್ಟನು. ಅವನ ಅಪ್ಪಣೆಯಂತೆ ಚಂದ್ರಗುಪ್ತನು ಬೀಗಮುದ್ರೆಗಳನ್ನು ಸ್ವೀಕರಿಸಿದನು; ಯುದ್ಧವು ನಿಂತಿತು.

## ಅಭ್ಯಾಸ

ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಷಯದ ಹೆಗ್ಗುರುತುಗಳನ್ನು ಉಪಯೋಗಿಸಿಕೊಂಡು ಉತ್ತಮ ಪ್ರಬಂಧ ಬರೆಯಿರಿ.

೧. **ಜಪಶಾಲೆ**

1. ಕ್ಷಪಣಕನ ಸೂಚನೆ. 2. ಶತ್ರುಪಲಾಯನ ಮಂತ್ರ ಜಪ.
3. ದೇವತಾಹಸ್ತ ದರ್ಶನಾಕಾಂಕ್ಷೆ. 4. ಪೂರ್ಣಾಹುತಿ.

೨. **ಭೇದತಂತ್ರ ಭಂಗ**

1. ಪಾಟಲೀಪುರದ ಮುತ್ತಿಗೆ. 2. ರಾಕ್ಷಸನ ಪತ್ರಗಳು.
3. ರಹಸ್ಯ ಭೇದನ. 4. ತಂತ್ರಭಂಗ.

೩. **ವಿಧಿವಿಲಾಸ**

1. ಯುದ್ಧಾರಂಭ. 2. ಜಪಶಾಲೆಯ ಪ್ರವೇಶ.
3, ಕಪಟ ಮಲಯಕೇತು. 4. ಅಂತ್ಯಕಾಲ.

'ನಾವೊಂದು ಬಗೆದರೆ ದೈವವೊಂದು ಬಗೆಯುವುದು' ನಂದರ ಕಥೆಯನ್ನು ಆಧಾರವಾಗಿಟ್ಟುಕೊಂಡು ಈ ನೀತಿವಾಕ್ಯದ ವಿಷಯವಾಗಿ ಒಂದು ಲೇಖನ ಬರೆಯಿರಿ.

# ಪ್ರಕರಣ ೪

**[ರಾಜ್ಯಾಧಿಕಾರ. ವಿಪತ್ಪರಿಹಾರ. ಪರ್ವತರಾಜ್ಯದಲ್ಲಿ. ಮುದ್ರಿಕಾ ಸಂಗ್ರಹಣ. ಮಿತ್ರಪ್ರೇಮ.]**

ಸುಪ್ರಭಾತದ ಮಂಗಳವಾದ್ಯಗಳು ಮೊಳಗಿದುವು. ಸುಳಿಗಾಳಿ ಸುಳಿದು ನಿದ್ರಿಸುತ್ತಿದ್ದ ಪಕ್ಷಿಸಂಕುಲವು ಎಚ್ಚರಗೊಂಡು ರೆಕ್ಕೆಗಳನ್ನು ಕೊಡವುತ್ತ ಮಧುರವಾಗಿ ಧ್ವನಿಗೈಯ್ಯುತ್ತ ದಿಕ್ಕುದಿಕ್ಕಿಗೆ ಹಾರಿದುವು. ಚಂದ್ರಗುಪ್ತನ ಅಭ್ಯುದಯವನ್ನು ಲೋಕಕ್ಕೆ ಸಾರಿ ಹೇಳುವಂತೆ ದೇವಾಲಯಗಳಲ್ಲಿ ಘಂಟಾ ಘೋಷವು ಕೇಳಿಸಿತು. ನಂದರ ಅವಸಾನವನ್ನು ನೋಡಲಾರದೆ ಅಸ್ತಂಗತ ನಾಗಿದ್ದ ಸೂರ್ಯದೇವನು ಚಂದ್ರಗುಪ್ತನ ಅಭ್ಯುದಯವನ್ನು ನೋಡಲೆಂದು ಉದಯಾದ್ರಿಯನ್ನೇರಿದನು. ಸ್ನಾನಾದಿಗಳಿಂದ ಪರಿಶುದ್ಧನಾದ ಚಂದ್ರಗುಪ್ತನು ರಾಜಗೃಹದ ದೇವಮಂದಿರವನ್ನು ಹೊಕ್ಕು ಪೂಜಾಕಾರ್ಯವನ್ನು ಮುಗಿಸಿ, ಚಾಣಕ್ಯನ ಬಳಿಗೆ ಬಂದು ಆತನಿಗೆ ವಂದಿಸಿ ಆಶೀರ್ವಾದವನ್ನು ಸ್ವೀಕರಿಸಿದನು. ಕಷ್ಟಗಳು ಕಳೆದು ರಾಜ್ಯಲಾಭದಿಂದ ಸಂತೋಷಗೊಂಡ ಚಂದ್ರಗುಪ್ತನು ರಾಹುವಿನಿಂದ ಮುಕ್ತನಾದ ಚಂದ್ರನಂತೆ ತೇಜಸ್ವಿಯಾಗಿ ತೋರುತ್ತಿದ್ದನು.

ಆಗ ಚಾಣಕ್ಯನು ನಂದರ ಬೊಕ್ಕಸದಲ್ಲಿದ್ದ ದಿವ್ಯ ವಸ್ತ್ರಭೂಷಣಗಳನ್ನು ತರಿಸಿ ಚಂದ್ರಗುಪ್ತನಿಗೆ ಅಲಂಕರಿಸಿ ಆಸ್ಥಾನದ ಸ್ವರ್ಣಪೀಠದಲ್ಲಿ ಕುಳ್ಳಿರಿಸಿದನು. ಅಧಿಕಾರಿಗಳೂ ಸೇನಾಪತಿಗಳೂ ಸಾಮಂತ ನರಪತಿಗಳೂ ಮುಂದೆ ಬಂದು ಚಂದ್ರಗುಪ್ತನಿಗೆ ವಂದಿಸಿ ನಜರು ಒಪ್ಪಿಸಿದರು. ಚಂದ್ರಗುಪ್ತನು ಅವರಿಗೆಲ್ಲಾ ವೀಳೆಯವನ್ನು ಕೊಡಿಸಿ ಪ್ರೀತಿಯಿಂದ ಕಂಡನು. ಆಶ್ರಿತರಾಜರಿಗೆ 'ನೀವು ನಮ್ಮ ಪಿತಾಮಹರ ಅಧಿಪತ್ಯದಲ್ಲಿ ನಿಮಗೆ ಇದ್ದ ರಾಜ್ಯಭಾಗಗಳ ಒಡೆತನವನ್ನು ಮೊದಲಿನಂತೆ ನಡೆಸುತ್ತ ನಮಗೆ ಆಶ್ರಿತರಾಗಿ ಪೊಗದಿಯನ್ನು ಸಲ್ಲಿಸುತ್ತ ನಮಗೆ ಸಹಾಯಕರಾಗಿರಿ.' ಎಂದು ನೇಮಿಸಿದನು. ಅಧಿಕಾರಿಗಳಿಗೆ 'ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನರಾಗಿ ನನ್ನ ಅಭ್ಯುದಯಕ್ಕೆ ಕಾರಣರಾಗಿ

ರುವ ಯಜಮಾನರಾದ ಚಾಣಕ್ಯರು ನನ್ನ ಪ್ರಾರ್ಥನೆಯನ್ನು ಮನ್ನಿಸಿ ಪ್ರಧಾನಪದವಿಯನ್ನು ಅಂಗೀಕರಿಸಿರುವುದು ನಮ್ಮೆಲ್ಲರ ಭಾಗ್ಯವೇ ಸರಿ. ಅರಸರಾದ ನಮಗೂ ಅವರ ಆಜ್ಞೆಯು ಶಿರೋಧಾರ್ಯವು. ಅವರ ಆಣತಿಯನ್ನು ಯಾರೂ ಮೀರಕೂಡದು ' ಎಂದು ಆಜ್ಞಾಪಿಸಿದನು.

ಬಳಿಕ ಚಾಣಕ್ಯನು ಪರ್ವತರಾಜನನ್ನೂ ಶೇಖರ ಸೇನಾಪತಿಯನ್ನೂ ರಾಜಮರ್ಯಾದೆಗಳಿಂದ ಗೌರವಿಸಿದನು. ಆತನ ಸಲಹೆಯಂತೆ ಶೇಖರನು ತಮ್ಮ ಸಹಾಯಕ್ಕಾಗಿ ಬಂದಿದ್ದ ರಾಜರುಗಳನ್ನೂ ಅವರ ಸೇನೆಗಳನ್ನೂ ಅವರವರ ದೇಶಕ್ಕೆ ಮರ್ಯಾದೆಗಳೊಡನೆ ಕಳುಹಿಸಿದನು. ತಮ್ಮ ಸೈನ್ಯದಲ್ಲೂ ಸ್ವಲ್ಪಭಾಗ ಉಳಿಸಿಕೊಂಡು ಉಳಿದುದನ್ನು ಹಿಂದಕ್ಕೆ ಕಳುಹಿಸಿದನು. ಚಾಣಕ್ಯನ ಮಾತಿನಂತೆ ಚಂದ್ರಗುಪ್ತನು ಸರ್ವಾರ್ಥಸಿದ್ಧಿ ಮಹಾರಾಜನನ್ನು ಕಂಡು ವಂದಿಸಿ ಅವರ ಆಶೀರ್ವಾದವನ್ನೂ ಬುದ್ಧಿವಾದವನ್ನೂ ಕೈಕೊಂಡು ಬಂದನು.

ಚಾಣಕ್ಯನು ತನ್ನಲ್ಲಿ-ಪಾಟಲೀಪುರದ ಅಧಿಕಾರಿಗಳೆಲ್ಲರೂ ಚಂದ್ರಗುಪ್ತನನ್ನು ಕಂಡು ಗೌರವ ಸಲ್ಲಿಸಿ ತಮ್ಮ ತಮ್ಮ ಅಧಿಕಾರಗಳಲ್ಲಿ ನಿಯುಕ್ತರಾಗಿ ಹೋದರು. ಆದರೆ ಎಲ್ಲರಿಗೂ ಮುಖ್ಯನಾಗಿ ರಾಜ್ಯಸೂತ್ರವನ್ನು ಹಿಡಿದಿದ್ದ ಅಮಾತ್ಯರಾಕ್ಷಸನೊಬ್ಬನು ಮಾತ್ರ ಬರಲಿಲ್ಲ; ಅಥವಾ ತನ್ನ ಪರವಾಗಿ ಯಾರನ್ನೂ ಕಳುಹಿಸಲಿಲ್ಲ. ದೂತರು ಅವನ ದರ್ಶನವೇ ಸಿಕ್ಕಲಿಲ್ಲವೆಂದು ಹೇಳಿದರು. ನಂದರಿಗೆ ಆಪ್ತನಾಗಿದ್ದ ಅವನು ಇಲ್ಲಿರುವುದು ಅಪಾಯವೆಂದು ತಿಳಿದು ಹೆಂಡತಿ ಮಕ್ಕಳನ್ನು ಆಪ್ತರ ಮನೆಯಲ್ಲಿ ಬಿಟ್ಟು ಗುಪ್ತಮಾರ್ಗದಿಂದ ನಗರವನ್ನು ತ್ಯಜಿಸಿ ಹೋಗಿರಬೇಕು. ದ್ವೇಷವನ್ನು ಸಾಧಿಸಲೋಸುಗ ಹೀಗೆ ಮಾಡಿರಬಹುದು. ಅವನಿಲ್ಲದ ಆಸ್ಥಾನವು ಚಂದ್ರನಿಲ್ಲದ ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಶೋಭಿಸದು. ಹೇಗಾದರೂ ಅವನನ್ನು ಸಂಗ್ರಹಿಸಿ ಮಂತ್ರಿ ಪದವಿಯನ್ನು ಅವನಿಗೆ ಒಪ್ಪಿಸಿದರೆ ನಾನು ಮಾಡಬೇಕಾದ ಕೆಲಸ ಮಾಡಿ ಮುಗಿಸಿದಂತಾಗುವುದು. ಚಂದ್ರಗುಪ್ತನಿಗೆ ದೊರೆತನವೂ ಸ್ಥಿರವಾಗುವುದು. ಅನಂತರ ನಾನು ತಪಸ್ಸಿಗೆ ತೆರಳಬಹುದು. ಆ ರಾಕ್ಷಸನು ಈಗ ಚಂದ್ರಗುಪ್ತನ ನಾಶಕ್ಕೆಂದು ಏನೇನು ತಂತ್ರಗಳನ್ನು ಮಾಡಿ ಹೋಗಿದ್ದಾನೋ ? ಜಾಗರೂಕತೆಯಿಂದ ಎ ಲ್ಲ ವ ನ್ನೂ ಪರಿಶೀಲಿಸುತ್ತಿರಬೇಕು--ಎಂದು ಯೋಚಿಸಿದನು.

ನಂದರ ಮರಣಾನಂತರ ಅಮಾತ್ಯರಾಕ್ಷಸನು ಅಶಾಂತವಾದ ತನ್ನ

ಮನಸ್ಸಿನಲ್ಲಿ 'ಈಗ ರಾಜ್ಯವು ಚಂದ್ರಗುಪ್ತನ ವಶವಾಯಿತು. ನಂದರಿಗೆ ಆಪ್ತನಾಗಿದ್ದ ನಾನು ವೈರಿಯಾದ ಚಂದ್ರಗುಪ್ತನಿಗೆ ಸಿಕ್ಕಿದರೆ ನನ್ನನ್ನು ಜೀವಸಹಿತ ಬಿಡುವನೆ? ಈ ಸಮಯದಲ್ಲಿ ಯಾರನ್ನೂ ನಂಬುವಹಾಗಿಲ್ಲ. ನನಗೆ ಸೋಲಾಗಿರುವಾಗ ನನ್ನ ಮಿತ್ರರೇ ನನಗೆ ಶತ್ರುಗಳಾಗುವರು. ನನ್ನ ಪ್ರಭುಗಳಾಗಿದ್ದ ನಂದರಿಗೆ ಜೋಡಿಸಿದ ಕೈಗಳನ್ನು ಮತ್ತೊಬ್ಬರಿಗೆ ಜೋಡಿಸಿದರೆ ನನ್ನ ಸ್ವಾಮಿಭಕ್ತಿಯು ಸಾರ್ಥಕವಾಗದು; ಅಲ್ಲದೆ ನನ್ನ ಪೌರುಷವೂ ವ್ಯರ್ಥವಾಗುವುದು. ಈ ಚಂದ್ರಗುಪ್ತನನ್ನು ಸಂಹರಿಸಿ ಸ್ವರ್ಗಸ್ಥರಾದ ನಂದರಿಗೆ ಸಂತೋಷವನ್ನುಂಟುಮಾಡದೇ ಹೋದರೆ ನಾನು ಬದುಕಿಯೂ ವ್ಯರ್ಥ.' ಎಂದು ಚಿಂತಿಸಿದನು.

ಬಳಿಕ ತನ್ನ ಆಪ್ತಮಿತ್ರನಾದ ವರ್ತಕ ಚಂದನದಾಸನನ್ನು ಕರೆಸಿಕೊಂಡು ತಾನು ಆಗ ನಗರವನ್ನು ಬಿಟ್ಟುಹೋಗಲಿರುವ ವಿಷಯವನ್ನು ತಿಳಿಸಿ, ಮರಳಿ ಬರುವವರೆಗೆ ಗುಟ್ಟಾಗಿ ರಕ್ಷಿಸಿಕೊಂಡಿರಬೇಕೆಂದು ಹೇಳಿ ಹೆಂಡತಿ ಮಕ್ಕಳನ್ನು ಅವನ ಸಂಗಡ ಕಳುಹಿಸಿಕೊಟ್ಟನು. ತನಗೆ ಆಪ್ತನಂತಿದ್ದ ಕ್ಷಪಣಕನಿಗೆ 'ಈ ಕನ್ಯೆಯು ಸೆರೆಯಾದ ವಲ್ಲಭರಾಜನ ಪುತ್ರಿಯು. ಎಷ್ಟು ರೂಪವತಿಯೋ ಅಷ್ಟೇ ಪ್ರೌಢೆ. ಈಕೆಯನ್ನು ಜ್ಯೇಷ್ಠ ನಂದನಿಗೆ ಪ್ರಿಯ ಪತ್ನಿಯನ್ನಾಗಿ ಮಾಡಬೇಕೆಂದಿದ್ದೆನು. ವಿಧಿವಶದಿಂದ ಅವನು ಮೃತನಾದುದರಿಂದ ನನ್ನ ಆಸೆಯು ನೆರವೇರದಂತಾಯಿತು. ನನಗೆ ಇನ್ನು ಇಲ್ಲಿ ಸ್ಥಳವಿಲ್ಲ. ನೀನಾದರೂ ಈಕೆಯನ್ನು ಚಂದ್ರಗುಪ್ತನಿಗೆ ಒಪ್ಪಿಸಿದರೆ ನನಗೆ ಅದಕ್ಕಿಂತ ಸಂತೋಷ ಬೇರೆಯಿಲ್ಲ. ಈ ಕಾರ್ಯಕ್ಕೆ ಮಿತ್ರನಾದ ನೀನೇ ತಕ್ಕವನು' ಎಂದು ಹೇಳಿ, ಸಮಯಬಂದಾಗ ಕಾರ್ಯಸಾಧನೆಗಾಗಿ ರಕ್ಷಿಸಿಕೊಂಡಿದ್ದ ರೂಪವತಿಯೂ ಯುವತಿಯೂ ಆದ ವಿಷಕನ್ಯೆಯನ್ನು ಅವನ ವಶಕ್ಕೆ ಒಪ್ಪಿಸಿದನು.

ಪಟ್ಟದಾನೆಯ ಮಾವಟಿಗನಾದ ಬರ್ಬರಕ, ಶಿಲ್ಪಿಯಾದ ದಾರುವರ್ಮ, ಶಯನಗೃಹದ ಅಧಿಕಾರಿಯಾದ ಭವನಪಾಲಕ, ರಾಜವೈದ್ಯ—ಅವರನ್ನು ಬರಮಾಡಿ ರಹಸ್ಯದಲ್ಲಿ ಅವರು ಏನೇನು ಮಾಡಬೇಕೆಂಬುದನ್ನು ತಿಳಿಸಿ ಅವರಿಗೆ ಅಪಾರ ಹಣವನ್ನು ಕೊಟ್ಟು, ಕಾರ್ಯಸಾಧನೆಯಾದ ಬಳಿಕ ಇನ್ನೂ ಹೆಚ್ಚಿನ ಪಾರಿತೋಷಿಕಗಳನ್ನು ಕೊಡುವುದಾಗಿ ಮಾತುಕೊಟ್ಟು ಕಳುಹಿಸಿದನು.

ರಾಯಸದ ಶಕಟದಾಸನಿಗೆ ತಿಳಿಸಬೇಕಾದುದನ್ನೆಲ್ಲಾ ತಿಳಿಸಿದನು. ಚತುರರಾದ ಗೂಢಚಾರರಿಗೆ ಬೇಕಾದಷ್ಟು ದ್ರವ್ಯಕೊಟ್ಟು ಅವರವರು ಮಾಡಬೇಕಾದ ಕಾರ್ಯಗಳನ್ನು ನೇಮಿಸಿದನು. ಪರಿಚಾರಕರಿಗೆ ತನಗೆ ಬೇಕಾಗುವ ವಸ್ತುಗಳನ್ನು ತಿಳಿಸಿ, ಅವುಗಳೊಡನೆ ಅವರು ಯಾವ ಯಾವ ಸ್ಥಳದಲ್ಲಿರಬೇಕೆಂದು ನೇಮಿಸಿದನು. ಆ ಬಳಿಕ ಅಮಾತ್ಯನು ಅರಮನೆಯ ಗುಪ್ತಸುರಂಗ ಮಾರ್ಗದಿಂದ ನಗರವನ್ನು ತ್ಯಜಿಸಿದನು.

## ವಿಪತ್ಪರಿಹಾರ

ಅಮಾತ್ಯನ ಮಾತಿನಂತೆ ಜೀವಸಿದ್ಧಿಯು ರಾಕ್ಷಸನು ಕಳುಹಿಸಿದ ಕನ್ಯೆಯನ್ನು ಪರೀಕ್ಷಿಸಲು ಅವಳಿಗೆ ಅನ್ನವನ್ನು ನೀಡಿದನು. ಅವಳು ತಿಂದು ಬಿಸುಟ ಅನ್ನವನ್ನು ತಿಂದ ಬೆಕ್ಕು ಅಲ್ಲಿಯೇ ಬಿದ್ದು ಸತ್ತಿತು. ಆಗ ಕ್ಷಪಣಕನು ಅದನ್ನು ಕಂಡು 'ಈಕೆ ವಿಷಕನ್ಯೆಯೇ ಸರಿ. ಇದು ಚಂದ್ರಗುಪ್ತನ ನಾಶಕ್ಕಾಗಿ ಮಾಡಿರುವ ರಾಕ್ಷಸನ ತಂತ್ರವಲ್ಲದೆ ಬೇರೆಯಲ್ಲ. ಈ ಸಂಗತಿಯು ನನ್ನ ಗುರುಗಳಾದ ಚಾಣಕ್ಯರಿಗೆ ಅರ್ಥಾಂತರದಿಂದ ತಿಳಿಯುವಂತೆ ಮಾಡಿ ಚಂದ್ರಗುಪ್ತನಿಗೆ ಒದಗಬಹುದಾದ ಆಪತ್ತನ್ನು ಪರಿಹರಿಸಬೇಕು.' ಎಂದು ನಿಶ್ಚಯಿಸಿದನು. ಒಂದು ಸಂಜೆ ಆಕೆಯನ್ನು ಕರೆದುಕೊಂಡು ಚಂದ್ರಗುಪ್ತನ ಆಸ್ಥಾನಕ್ಕೆ ಬಂದು 'ಮಹಾರಾಜ, ಈಕೆಯು ಸೆರೆಯಾದ ವಲ್ಲಭರಾಜನ ತನುಜೆ. ರಾಕ್ಷಸನು ಇವಳನ್ನು ಸಾಕಿ ಪ್ರೌಢಳನ್ನಾಗಿ ಮಾಡಿದನು. ಅವನು ಇವಳನ್ನು ಇಲ್ಲಿಯೇ ಬಿಟ್ಟುಹೋಗಲು ರೂಪವತಿಯಾಗಿ ಅನಾಥಳಾದ ಇವಳು ರಾಜಯೋಗ್ಯಳೆಂದು ಇಲ್ಲಿಗೆ ಕರೆತಂದಿದ್ದೇನೆ. ಕಾಳಸರ್ಪದಂತೆ ನೀಳವಾಗಿ ಹರನ ನೀಲಕಂಠದಂತೆ ಶೋಭಿಸುವ ಕೇಶರಾಶಿಯು ಈಕೆಯ ಸೌಂದರ್ಯವನ್ನು ದ್ವಿಗುಣಗೊಳಿಸಿದೆ. ಇವಳನ್ನು ನಾಡಾಡಿ ಹೆಣ್ಣೆಂದು ತಿಳಿಯಕೂಡದು. ಈಕೆಯನ್ನು ಸ್ವೀಕರಿಸಿದರೆ ರಾಕ್ಷಸನ ಅಭೀಷ್ಟವು ನೆರವೇರಿದಂತಾಗುವುದು. ಎಂದು ಪ್ರಾರ್ಥಿಸಿಕೊಂಡನು.

ಜೀವಸಿದ್ಧಿಯು ಹೇಳಿದ ಭಾವಗರ್ಭಿತವಾದ ಅರ್ಥವನ್ನು ಚಾಣಕ್ಯನು ಗ್ರಹಿಸಿದನು. ಕಾಳಸರ್ಪ, ನೀಲಕಂಠ ಪದಪ್ರಯೋಗಗಳಿಂದ ಈಕೆ ವಿಷಕನ್ಯೆಯಾಗಿರಬೇಕೆಂದು ಭಾವಿಸಿ ಪರೀಕ್ಷಿಸಿ ನೋಡಬೇಕೆಂದು ಕೆಲವು ಪಾರಿವಾಳ

ಗಳನ್ನೂ, ಗಿಣಿಗಳನ್ನೂ ತರಿಸಿದನು. ಗಿಣಿಗಳು ಕಿರಿಚಿಕೊಂಡವು. ಅವಳ ಹತ್ತಿರ ಸುಳಿದ ಪಾರಿವಾಳಗಳು ರೆಕ್ಕೆಗಳನ್ನೊದರುತ್ತ ಮುದುರಿಬಿದ್ದು ಸತ್ತುವು. ಆಕೆ ವಿಷಕನ್ಯೆಯೆಂಬುದು ಅದರಿಂದ ದೃಢವಾಯಿತು. ಆದರೂ ಅದನ್ನು ಬಹಿರಂಗಪಡಿಸಕೂಡದೆಂದು ಚಾಣಕ್ಯನು ಹಕ್ಕಿಗಳು ಆಹಾರ ಸಾಲದೆಯೋ ಪಾರ್ಶ್ವವಾಯು ಬಡಿದೋ ಸತ್ತವೆಂದು ಹಕ್ಕಿಗಳನ್ನು ಸಾಕಿದವರ ಮೇಲೆ ಕೋಪವನ್ನು ತೋರ್ಪಡಿಸಿ ಅವರನ್ನು ಅಲ್ಲಿಂದ ಹೊರಡಿಸಿದನು.

"ಅಯ್ಯಾ ಕ್ಷಪಣಕನೆ, ನೀನು ರಕ್ಷಕರಿಲ್ಲದ ಈಕೆಯನ್ನು ಚಂದ್ರಗುಪ್ತ ಮಹಾರಾಜನಿಗೆ ಒಪ್ಪಿಸಿ ಪುಣ್ಯ ಪಡೆಯಬೇಕೆಂದು ಬಂದುದು ಒಳ್ಳೆಯದೇ ಆಯಿತು. ಆದರೆ ಚಂದ್ರಗುಪ್ತನು ಏಕಪತ್ನೀವ್ರತಸ್ಥನಾದುದರಿಂದ ಈಕೆಯನ್ನು ಈಗ ಈ ಪಟ್ಟಣದ ಬಳಿ ಬಿಡಾರ ಮಾಡಿರುವ ಪರ್ವತೇಶ್ವರನಿಗೆ ಒಪ್ಪಿಸಿ ನೀನು ಸಂತೋಷದಿಂದ ಹಿಂದಿರುಗಬಹುದು. ಪರ್ವತರಾಜನು ಇದರಿಂದಸಂತೋಷಿಸು ವುದಾದರೆ ನಮಗೂ ಸಂತೋಷ. ಅದರಿಂದ ರಾಕ್ಷಸನಿಗೆ ಚಂದ್ರಗುಪ್ತನ ಮೇಲಿರುವ ಕೋಪವೂ ಕಡಿಮೆಯಾಗಬಹುದು." ಎಂದು ಅರ್ಥಗರ್ಭಿತವಾಗಿ ಚಾಣಕ್ಯನು ಕ್ಷಪಣಕನಿಗೆ ಹೇಳಿ ಕಳುಹಿಸಿದನು. ಮುಂದೆ ನಡೆಯಬೇಕಾದ ಕಾರ್ಯವನ್ನು ಚಿಂತಿಸಿ ಸಿದ್ಧಾರ್ಥಕನ ಮೂಲಕ ಬಾಗುರಾಯಣನಿಗೆ ತಲುಪಿಸು ವಂತೆ ಒಂದು ಕಾಗದವನ್ನು ಬರೆದುಕೊಟ್ಟನು.

ಜೀವಸಿದ್ಧಿಯು ಆ ಕನ್ಯೆಯನ್ನು ಕರೆದುಕೊಂಡು ಪರ್ವತರಾಜನ ಬಳಿಗೆ ಹೋದನು. ಪರ್ವತರಾಜನು ಆಕೆಯ ಸೌಂದರ್ಯಕ್ಕೆ ಮರುಳಾಗಿ ಸಂತೋಷ ದಿಂದ ಆಕೆಯನ್ನು ಸ್ವೀಕರಿಸಿ ಆಕೆಯ ದೆಸೆಯಿಂದ ಮೃತನಾದನು.

ಬಾಗುರಾಯಣನು ಚಾಣಕ್ಯನಕಾಗದವನ್ನು ನೋಡಿಕೊಂಡು ಅರುಣೋ ದಯಕ್ಕೆ ಮುಂಚೆಯೇ ತಮ್ಮ ಕಡೆಯ ಸೈನ್ಯವು ಮಲಯಕೇತುವಿನ ಬಿಡಾರದ ಕಡೆ ಹೊರಡುವಂತೆ ಗೊತ್ತುಮಾಡಿದನು. ತಾನು ಬೇಗನೆ ಎದ್ದು ಮುಂಚಿತ ವಾಗಿಯೇ ಮಲಯಕೇತುವನ್ನು ನೋಡಲು ಸಿದ್ಧನಾಗಿ ಹೊರಟನು. ದಾರಿ ಯಲ್ಲಿಯೇ ವಿಷಕನ್ಯೆಯುಬರುತ್ತಿರುವುದನ್ನು ಕಂಡು ಅವಳಿಂದ ಪರ್ವತರಾಜನು ಮೃತಿಹೊಂದಿದ ಸಂಗತಿಯನ್ನು ದೃಢಪಡಿಸಿಕೊಂಡನು. ಇನ್ನೂ ನಿದ್ರಾಸುಖ ವನ್ನನುಭವಿಸುತ್ತಿದ್ದ ಮಲಯಕೇತುವನ್ನು ಎಚ್ಚರಗೊಳಿಸಿ "ರಾಜಕುಮಾರ, ಬೇಗಹೊರಡು. ನೀನು ಇಲ್ಲಿ ಕ್ಷಣಕಾಲ ನಿಂತರೆ ಬದುಕುವಂತಿಲ್ಲ. ಚಾಣಕ್ಯನ

ಆಜ್ಞೆಯಂತೆ ನಿನ್ನನ್ನು ಕೊಲ್ಲಲು ಬರುತ್ತಿರುವ ಸೈನ್ಯವನ್ನು ನೋಡು ' ಎಂದು ಪ್ರಾಣಭಯ ಹುಟ್ಟಿಸಿದನು. ಮಲಯಕೇತುವು ತನ್ನ ಶಿಬಿರದ ಕಡೆ ಬರುತ್ತಿದ್ದ ಸೇನೆಯನ್ನು ಕಂಡು ಹೆದರಿ, ತನ್ನ ತಂದೆ ಏನಾದರೆಂದು ಕೇಳಲು ಭಾಗು ರಾಯಣನು ಆ ವಿಷಯವನ್ನು ಆಮೇಲೆ ತಿಳಿಸಲಾಗುವುದೆಂದು ಹೇಳಿ ಅವ ನನ್ನು ಅಲ್ಲಿಂದ ಕರೆದುಕೊಂಡು ಪರ್ವತರಾಜ್ಯಾಭಿಮುಖವಾಗಿ ಧಾವಿಸಿದನು.

ಸ್ವಲ್ಪದೂರ ಹೋದಮೇಲೆ "ರಾಜಕುಮಾರ, ರಾತ್ರಿ ಚಂದ್ರಗುಪ್ತನ ದೂತರು ಬಂದು 'ನಾಳೆ ಬೆಳಗಾಗುವುದರೊಳಗೆ ಸೇನೆಗಳು ಮಲಯಕೇತುವಿನ ಬಿಡಾರದ ಬಳಿ ಯುದ್ಧಕ್ಕೆ ಸಿದ್ಧವಾಗಿರುವಂತೆ ರಾಜಾಜ್ಞೆಯಾಗಿದೆ ' ಎಂದು ಸೇನಾಪತಿಗಳಿಗೆಲ್ಲಾ ತಿಳಿಸಿ ಹೋದರು. ಸೈನ್ಯವು ಪ್ರಯಾಣಸಿದ್ಧತೆಯಲ್ಲಿ ತೊಡಗಿದ್ದಿತು. ನನಗೆ ಚಂದ್ರಗುಪ್ತನ ಆಜ್ಞೆ ಸರಿದೋರಲಿಲ್ಲ. ಇದರಿಂದ ನಿಮಗೇನಾದರೂ ವಿಪತ್ತು ಸಂಭವಿಸಬಹುದೆಂದು ಭಾವಿಸಿ ನಿಮಗೆ ಈ ಸಮಾಚಾರ ತಿಳಿಸಬೇಕೆಂದು ಯೋಚಿಸಿ, ರಾತ್ರಿ ನಿದ್ರೆ ಹತ್ತದೆ ನಿಮ್ಮ ಬಳಿಗೆ ಬೇಗನೆ ಬಂದೆನು. ದಾರಿಯಲ್ಲಿ ಗಾಬರಿ ಗಾಬರಿಯಾಗಿ ಓಡಿಬರುತ್ತಿದ್ದ ಒಬ್ಬ ಕನ್ಯೆಯನ್ನು ಕಂಡೆನು. ಆಕೆಯು ಯಾರೆಂಬುದನ್ನು ಬೆದರಿಸಿ ಕೇಳಲು ಆಕೆಯು 'ನಾನು ರಾಕ್ಷಸನಿಂದ ಪೋಷಿತಳಾಗಿದ್ದ ವಿಷಕನ್ಯೆ. ಆತನು ಪುರ ವನ್ನು ಬಿಟ್ಟು ಹೋಗುವಾಗ ನನ್ನನ್ನು ಕ್ಷಪಣಕನಾದ ಜೀವಸಿದ್ಧಿಯ ವಶಮಾಡಿ ತಾನು ಹೇಳಿದಂತೆ ಮಾಡಬೇಕೆಂದು ಹೇಳಿಹೋದನು. ಅವನು ನನ್ನನ್ನು ಪರ್ವತರಾಜನಿಗೆ ಒಪ್ಪಿಸಿದನು. ಆತನು ನನ್ನ ದೆಸೆಯಿಂದ ಮಡಿದನು ' ಎಂದು ತಿಳಿಸಿದಳು.

ಆ ಮಾತು ಕೇಳಿ ನಾನು ' ಚಾಣಕ್ಯನು ನಿನಗೆ ಅರ್ಧರಾಜ್ಯ ಕೊಡ ಬೇಕೆಂಬ ಲೋಭಬುದ್ಧಿಯಿಂದ ರಾಕ್ಷಸನು ಬೆಳೆಸಿದ್ದ ವಿಷಕನ್ಯೆಯನ್ನು ಜೀವಸಿದ್ಧಿಯ ಮೂಲಕ ನಿಮ್ಮ ತಂದೆಯವರು ಸ್ವೀಕರಿಸುವಂತೆ ಮಾಡಿ, ಅವರನ್ನುಸಂಹರಿಸಿರಬೇಕೆಂದು ಊಹಿಸಿದೆ. ನಿಮ್ಮನ್ನೂ ಸಂಹರಿಸುವುದಕ್ಕಾಗಿ ಸೇನೆಯನ್ನು ಕಳುಹಿಸಿದ್ದಾನೆಂದು ಭಾವಿಸಿದೆ. ವಿಷಕನ್ಯೆಯ ಮಾತನ್ನು ಪ್ರಮಾಣಿಸಿ ನೋಡಬೇಕೆಂದು ನಿಮ್ಮ ತಂದೆಯ ಬಿಡಾರದ ಬಳಿಗೆ ಹೋದೆನು. ಅವರು ಮೃತರಾಗಿರುವ ಸಂಗತಿ ಸ್ಥಿರಪಟ್ಟಿತು. ನಿಮ್ಮ ಶಿಬಿರದ ಕಡೆಗೆ ಚಂದ್ರಗುಪ್ತನ ಸೈನ್ಯ ಧಾವಿಸಿ ಬರುತ್ತಿರುವುದನ್ನು ಕಂಡು ಹೇಗಾದರೂ

ನಿಮ್ಮನ್ನು ವಿಪತ್ತಿನಿಂದ ಪಾರುಮಾಡಬೇಕೆಂದು ತ್ವರಿತವಾಗಿ ನಿಮ್ಮ ಬಳಿಗೆ ಬಂದು ನಿಮ್ಮನ್ನು ಹೊರಡಿಸಿಕೊಂಡು ಬಂದೆ. ಚಂದ್ರಗುಪ್ತಚಾಣಕ್ಯರು ಕೇವಲ ಕೃತಘ್ನರು.' ಎಂದು ಬಾಗುರಾಯಣನು ತಿಳಿಸಿದನು.

ತಂದೆಯ ಮರಣವಾರ್ತೆಯನ್ನು ಕೇಳಿ ಮಲಯಕೇತುವು ಬಹಳ ಮರುಗಿದನು. ಕಾರಣರಾದ ಚಂದ್ರಗುಪ್ತಚಾಣಕ್ಯರನ್ನು ಸಂಹರಿಸದೆ ಹಿಂದಿರುಗುವುದಿಲ್ಲವೆಂದು ರೋಷಾವೇಶದಿಂದ ಖಡ್ಗವನ್ನು ಹಿಡಿದು ಹೊರಡಲುದ್ಯುಕ್ತನಾದನು. ಬಾಗುರಾಯಣನು ಸಾಕಾದಷ್ಟು ಸೈನ್ಯಸಹಾಯವಿಲ್ಲದಿರುವಾಗ ದುಡುಕಬಾರದೆಂದು ಅವನನ್ನು ತಡೆದು, ನಿಧಾನವಾಗಿ ದ್ವೇಷಸಾಧಿಸಬೇಕೆಂದು ಸಲಹೆಕೊಟ್ಟನು. ಸಮಯದಲ್ಲಿ ತನ್ನ ಪ್ರಾಣವನ್ನುಳಿಸಿ ಸಹಾಯ ಮಾಡಿದುದರಿಂದ ತನಗೆ ಅವನು ಪರಮಾಪ್ತನೆಂದು ಭಾವಿಸಿ ಬಾಗುರಾಯಣನನ್ನು ತನ್ನ ರಾಜ್ಯಕ್ಕೇ ಕರೆದುಕೊಂಡು ಹೋದನು. ಅಲ್ಲಿ ತನ್ನ ಮಂತ್ರಿಯನ್ನಾಗಿ ಮಾಡಿಕೊಂಡನು. ಮುಂದಿನ ಕಾರ್ಯಸಾಧನೆಗಾಗಿ ಬಾಗುರಾಯಣನು ಮಲಯಕೇತುವಿನ ಬಳಿ ಆಪ್ತನಂತೆ ಇರಬೇಕೆಂದೇ ಮಾಡಿದ ಚಾಣಕ್ಯನ ತಂತ್ರ ಫಲಿಸಿತು.

'ಯುದ್ಧ ಸಮಯದಲ್ಲಿ ರಾಕ್ಷಸನ ತಂತ್ರಕ್ಕೆ ಒಳಗಾಗಿ ಚಂದ್ರಗುಪ್ತನನ್ನು ಸೆರೆಗೈದು ನಂದರಿಗೆ ಒಪ್ಪಿಸಿ, ಅವರ ವಿಶ್ವಾಸವನ್ನೂ ರಾಜ್ಯಲಾಭವನ್ನೂ ಹೊಂದಿ ಸ್ವದೇಶಕ್ಕೆ ಹಿಂದಿರುಗಬೇಕೆಂದು ದುರಾಲೋಚನೆಯನ್ನು ಮಾಡಿದ್ದ ಕೃತಘ್ನನಾದ ಪರ್ವತರಾಜನಿಗೆ ತಕ್ಕ ಪ್ರಾಯಶ್ಚಿತ್ತವಾಯಿತು. ಅವನಿಗೆ ಕೊಡಬೇಕಾಗಿದ್ದ ಅರ್ಧ ರಾಜ್ಯವೂ ಉಳಿಯಿತು.' ಎಂದು ಚಾಣಕ್ಯನು ಒಳಗೆ ಸಂತೋಷದಿಂದಿದ್ದರೂ ಹೊರಗೆ ವ್ಯಸನ ಹೊಂದಿದವನಂತೆ ತೋರ್ಪಡಿಸುತ್ತ ರಾಜಮರ್ಯಾದೆಗಳೊಡನೆ ಪರ್ವತರಾಜನ ಶವಸಂಸ್ಕಾರ ಮಾಡಿಸಿ, ವಿಪ್ರರಿಗೆ ದಾನಧರ್ಮಗಳನ್ನು ಕೊಡಿಸಿ ಅವನು ಧರಿಸುತ್ತಿದ್ದ ಅಮೂಲ್ಯಾಭರಣಗಳನ್ನು ಬೊಕ್ಕಸದಲ್ಲಿಡುವಂತೆ ಗೊತ್ತುಮಾಡಿದನು.

ರಾಕ್ಷಸನು ಇನ್ನೇನು ಕಪಟವನ್ನು ರಚಿಸಿರುವನೋ ಅದೆಲ್ಲವನ್ನೂ ಶೋಧಿಸಬೇಕೆಂದು ಚಾಣಕ್ಯನು ಯೋಚಿಸಿ ದೂತರಿಗೆ 'ಈ ಶುದ್ಧ ದಶಮೀ ಬುಧವಾರ ಚಂದ್ರಗುಪ್ತ ಮಹಾರಾಜರಿಗೆ ರಾಜ್ಯಾಭಿಷೇಕವಾಗುವುದೆಂದು ಡಂಗುರ ಹಾಕಿಸಿ.' ಎಂದು ಆಜ್ಞಾಪಿಸಿ ರಾಜ್ಯಾಭಿಷೇಕಕ್ಕಾಗಿ ಪಾಟಲೀಪುರ

ವನ್ನು ವಿಶೇಷರೀತಿಯಲ್ಲಿ ಶೃಂಗರಿಸುವಂತೆ ಅಧಿಕಾರಿಗಳಿಗೆ ನೇಮಿಸಿದನು. ಅದರಂತೆ ಪಟ್ಟಣವು ಅಲಂಕರಿಸಲ್ಪಡುತ್ತಿತ್ತು. ಆ ಸಮಯದಲ್ಲಿ ರಾಕ್ಷಸನಿಂದ ನೇಮಿಸಲ್ಪಟ್ಟಿದ್ದ ದಾರುವರ್ಮನೆಂಬ ಶಿಲ್ಪಿಯು ರಾಜದ್ವಾರದಲ್ಲಿ ದೇವತಾ ವಿಮಾನದಂತೆ ಕೃತ್ರಿಮ ಶಿಲ್ಪವನ್ನು ರಚಿಸಿ, ಜನಕ್ಕೆ ತಿಳಿಯದಂತೆ ಹೊಸ ಬಗೆಯಲ್ಲಿ ಅಲಂಕರಿಸಿ ಚಾಣಕ್ಯನ ಬಳಿಗೆ ಬಂದು 'ಸ್ವಾಮಿ, ರಾಜದ್ವಾರವು ಕುರುಜು ಮೇಲುಕಟ್ಟುಗಳಿಂದ ಅಲಂಕರಿಸಲ್ಪಟ್ಟು ಸಿದ್ಧವಾಗಿದೆ. ತಮ್ಮ ವಿಶೇಷ ಕಟಾಕ್ಷಕ್ಕೆ ಪಾತ್ರನಾಗಬೇಕೆಂದು ತಮ್ಮ ಅಪ್ಪಣೆಯಾಗುವುದಕ್ಕೆ ಮುಂಚಿತ ವಾಗಿಯೇ ನಾನು ಕಲಿತಿರುವ ಶಿಲ್ಪಕಲಾಕೌಶಲ್ಯವನ್ನು ಉಪಯೋಗಿಸಿ ನಿರ್ಮಿಸಿದ್ದೇನೆ. ಅದನ್ನು ಪರಾಂಬರಿಸಿ ನನ್ನಲ್ಲಿ ಕೃಪೆಮಾಡಬೇಕು.' ಎಂದು ಪ್ರಾರ್ಥಿಸಿಕೊಂಡನು.

ಚಾಣಕ್ಯನಿಗೆ ಶಿಲ್ಪಿಯ ಮಾತು ಕೇಳಿ ಆಶ್ಚರ್ಯವಾಯಿತು. 'ನಾನು ಹೇಳುವುದಕ್ಕೆ ಮುಂಚಿತವಾಗಿಯೇ ಈತನು ಬಹುದ್ರವ್ಯ ವ್ಯಯಮಾಡಿ ರಾಜದ್ವಾರವನ್ನಲಂಕರಿಸುವುದಕ್ಕೆ ಕಾರಣವೇನು? ಈತನು ರಾಕ್ಷಸನಿಂದ ನಿಯುಕ್ತನಾಗಿ ಕಪಟಶಿಲ್ಪವನ್ನು ಚಂದ್ರಗುಪ್ತನ ನಿಗ್ರಹಕ್ಕಾಗಿ ಮಾಡಿರ ಬೇಕೆಂದು ತೋರುತ್ತಿದೆ. ಇದು ಕೃತ್ರಿಮವೇ ಆಗಿದ್ದರೆ ಇದರಿಂದ ಪರ್ವತ ರಾಜನ ತಮ್ಮನಾದ ವಿರೋಚನನನ್ನು ನಿಗ್ರಹಿಸಬಹುದು. ನಾವು ಹೇಳುವುದಕ್ಕೆ ಮುಂಚಿತವಾಗಿಯೇ ಇದು ನಿರ್ಮಿಸಲ್ಪಟ್ಟು ಸಿದ್ಧವಾಗಿರುವುದರಿಂದ ಅಪವಾದವು ನಮಗುಂಟಾಗದೆ ರಾಕ್ಷಸನನ್ನೇ ಹೊಂದುವುದು.' ಎಂದು ಯೋಚಿಸಿ 'ನೀನು ನಾವು ಹೇಳುವುದಕ್ಕೆ ಮುಂಚಿತವಾಗಿ ನಮ್ಮ ಅಭಿಪ್ರಾಯವನ್ನು ಗ್ರಹಿಸಿ ರಾಜ ದ್ವಾರವನ್ನು ಅಲಂಕರಿಸಿದುದರಿಂದ ಸಂತೋಷವಾಯಿತು. ಚಂದ್ರಗುಪ್ತನಿಗೆ ಪಟ್ಟಾಭಿಷೇಕವಾದಮೇಲೆ ನೀನು ಮಾಡಿದ ಶಿಲ್ಪಕ್ಕನುಸಾರವಾದ ಫಲಕ್ಕೆ ಪಾತ್ರನಾಗುವೆ.' ಎಂದು ಹೇಳಿ ಅವನನ್ನು ಕಳುಹಿಸಿದನು.

ಪರ್ವತರಾಜನ ಮರಣ ಸುದ್ದಿಯನ್ನು ಕೇಳಿ ಭೀತಿಗೊಂಡು ಸ್ವದೇಶಾಭಿ ಮುಖವಾಗಿ ಓಡಿಹೋಗುತ್ತಿದ್ದ ವಿರೋಚನನನ್ನು ಸನ್ಮಾನಿಸಿ ಕರೆತರುವಂತೆ ವತ್ಸಲಾಯನನನ್ನು ಕಳುಹಿಸಿದನು. ಅವನು ವಿರೋಚನನನ್ನು ಕಂಡು ಚಾಣ ಕ್ಯನು ಅರ್ಧರಾಜ್ಯವನ್ನು ಅವನಿಗೆ ಕೊಡಬೇಕೆಂದಿರುವ ಸಂಗತಿ ತಿಳಿಸಿ ಅವ ನನ್ನು ಒಪ್ಪಿಸಿ ಕರೆತಂದನು. 'ವಿರೋಚನ, ಚಂದ್ರಗುಪ್ತನಿಗೆ ಸಹಾಯಕನಾದ

ನೆಂಬ ದ್ವೇಷವನ್ನು ಸಾಧಿಸಿ ರಾಕ್ಷಸನು ನಿಮ್ಮಣ್ಣನನ್ನು ಕೊಲ್ಲಿಸಿದನೆಂದು ತಿಳಿಯದೆ ಜನಾಪವಾದಕ್ಕೆ ನನ್ನನ್ನು ಗುರಿಮಾಡಿ ಮಲಯಕೇತುವಿನಂತೆ ನೀನೂ ಸರಿಯಾಗಿ ವಿಚಾರಮಾಡದೆ ಹೋಗಬಹುದೆ? ನಾನು ಮಾತಿಗೆ ತಪ್ಪುವವನಲ್ಲ. ಬುಧವಾರ ಲಗ್ನ ನಿಶ್ಚಯವಾಗಿದೆ. ಅರ್ಧರಾಜ್ಯಾಭಿಷೇಕ ನಿನಗೆ ಮೊದಲೇ ಆಗಲಿ. ಉಳಿದುದು ಆ ಬಳಿಕ ನಡೆಯಲಿ.' ಎಂದು ಚಾಣಕ್ಯನು ಹೇಳಿ ಬುಧವಾರದ ಅರ್ಧರಾತ್ರಿಯಲ್ಲಿ ಮುಹೂರ್ತವನ್ನು ಗೊತ್ತುಮಾಡಿದನು.

ಆ ಮುಹೂರ್ತದಲ್ಲಿ ವಿರೋಚನನಿಗೆ ಚಂದ್ರಗುಪ್ತನ ಆಭರಣಗಳನ್ನು ಧರಿಸಿ, ರತ್ನಖಚಿತವಾದ ಕವಚವನ್ನು ತೊಡಿಸಿ, ದಿವ್ಯದುಕೂಲವನ್ನು ಹೊದಿಸಿ ಸಿಂಹಪೀಠದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿಸಿದನು. ಪುರಜನರು ಚಂದ್ರಗುಪ್ತನಿಗೆ ಪಟ್ಟಾಭಿಷೇಕವೆಂದು ಹೇಳಿಕೊಂಡು ಗುಂಪುಗುಂಪಾಗಿ ಸೇರುತ್ತಿದ್ದರು. ಅನಂತರ ನಂದರು ಏರುತ್ತಿದ್ದ ಅಲಂಕರಿಸಿದ ಪಟ್ಟದಾನೆಯ ಮೇಲೆ ವಿರೋಚನನನ್ನು ಕುಳ್ಳಿರಿಸಿದನು. ಚಂದ್ರಗುಪ್ತನ ಪರಿವಾರವು ಸಂಗಡ ಬರುತ್ತಿರಲು ಸಕಲ ರಾಜವೈಭವದಿಂದ ಮೆರೆವಣಿಗೆಯು ಹೊರಟಿತು. ಪಟ್ಟದಾನೆಯು ಮೆಲ್ಲಮೆಲ್ಲನೆ ನಡೆಯುತ್ತ ರಾಜದ್ವಾರದಲ್ಲಿ ಬರುತ್ತಿರಲು ಮೊದಲು ರಾಕ್ಷಸನಿಂದ ಪ್ರೇರಿತನಾಗಿದ್ದ ದಾರುವರ್ಮನು ಮೇಲಿನ ಭಾಗದಲ್ಲಿ ಕಾಣದಂತೆ ಅಡಗಿದ್ದು ಗಜಾರೂಢನಾಗಿ ಬರುವವನೇ ಚಂದ್ರಗುಪ್ತನೆಂದು ನಿಶ್ಚಯಿಸಿ ಅವನ ಶಿರಸ್ಸಿನ ಮೇಲೆ ಸರಿಯಾಗಿ ಭಾರವಾದ ತೊಲೆ ಬೀಳುವಂತೆ ತಾನು ಮಾಡಿದ್ದ ಕೀಲನ್ನು ಕೊಡತಿಯಿಂದ ಬಡಿದನು.

ಅಷ್ಟರಲ್ಲಿ ರಾಕ್ಷಸನಿಂದ ನೇಮಿಸಲ್ಪಟ್ಟಿದ್ದ ಬರ್ಬರಕನೆಂಬ ಮಾವುತನು 'ಹಿಂದೆ ಕುಳಿತಿರುವವನೇ ಚಂದ್ರಗುಪ್ತನು ; ಇವನನ್ನು ಸಂಹರಿಸುವುದಕ್ಕೆ ಇದೇ ಸಮಯ' ಎಂದು ಭಾವಿಸಿ ತನ್ನ ಕೈಯಲ್ಲಿದ್ದ ಸುವರ್ಣದಂಡದಲ್ಲಿ ಹುದುಗಿಸಿದ್ದ ಶಸ್ತ್ರವನ್ನು ಹೊರಗೆ ಸೆಳೆದನು. ಪಟ್ಟದಾನೆಯು ತನ್ನನ್ನು ಪ್ರಹರಿಸುವನೆಂಬ ಭೀತಿಯಿಂದ ಸ್ವಲ್ಪ ಹಿಂದೆ ಸರಿಯಲು ದಾರುವರ್ಮನು ಸಡಲಿಸಿದ ಮಹಾಭಾರವಾದ ತೊಲೆಯು ಆ ಮಾವುತನ ತಲೆಯಮೇಲೆ ಬಿದ್ದು ಅವನು ಮೃತನಾದನು. ತನ್ನ ಪ್ರಯತ್ನವು ವಿಫಲವಾಗಲು ದಾರುವರ್ಮನು ತನ್ನಲ್ಲಿದ್ದ ಕಬ್ಬಿಣದ ಕೊಡತಿಯನ್ನೆತ್ತಿ ವಿರೋಚನನ ತಲೆಗೆ ಹೊಡೆಯಲು ವಿರೋಚನನೂ ಸತ್ತನು. ಮೈಗಾವಲಿಗಾಗಿ ಬಂದಿದ್ದ ಭಲ್ಲೆಯದವರು

ದಾರುವರ್ಮನನ್ನು ತಿವಿದು ಕೆಡವಿದರು. ಚಾಣಕ್ಯನ ಬುದ್ಧಿಶಕ್ತಿಯಿಂದ ಆ ವಿಪತ್ತು ಚಂದ್ರಗುಪ್ತನನ್ನು ಬಿಟ್ಟು ವಿರೋಚನನನ್ನು ಹೊಂದಿತು.

ಚಾಣಕ್ಯನು ಚಂದ್ರಗುಪ್ತನು ವಾಸಮಾಡಬೇಕಾಗಿದ್ದ ಕುಮಾರಭವನವನ್ನು ಶೋಧಿಸಬೇಕೆಂದು ಅಲ್ಲಿಗೆ ಹೋದನು. ಅಲ್ಲಿದ್ದ ಒಂದು ಚಿತ್ರಪಟವನ್ನು ನೋಡಿ 'ಇಲ್ಲಿ ಯಾರೋ ತಿಳಿಯದವನು ಉಷಃಕಾಲದಲ್ಲಿ ಮಾಡುವ ದೇವತಾ ದರ್ಶನದ ಚಿತ್ರಪಟವನ್ನು ಎಡಗಡೆಯಲ್ಲಿ ಕಟ್ಟಿದ್ದಾನೆ. ಅದನ್ನು ತೆಗೆದು ಬಲಭಾಗದಲ್ಲಿ ಕಟ್ಟಿರಿ' ಎಂದು ಸೇವಕರಿಗೆ ಆಜ್ಞೆಮಾಡಿದನು. ಅವರು ಅದನ್ನು ತೆಗೆದಾಗ ಅದರ ಹಿಂದೆ ಮಾಡಿದ್ದ ದೊಡ್ಡ ಗೂಡಿನಲ್ಲಿ ಒಬ್ಬ ಪುರುಷನು ಅಡಗುವಷ್ಟು ಸ್ಥಳವಿದ್ದು ಅಲ್ಲಿ ಹೊಸದಾಗಿ ಸಾಣೆಹಿಡಿದಿದ್ದ ಶಸ್ತ್ರವೂ ಇದ್ದಿತು. ಅದನ್ನು ತೆಗೆಸಿ ಅಲ್ಲಿ ಇನ್ನೇನು ವಿಶೇಷವಿರುವುದೋ ಶೋಧಿಸಬೇಕೆಂದು ನೋಡಲು ನಿಲುವುಗನ್ನಡಿಯ ರಂಧ್ರದಿಂದ ಇರುವೆಗಳು ಅನ್ನದ ಅಗುಳನ್ನು ಕಚ್ಚಿಕೊಂಡು ಸಾಲಿಟ್ಟು ಬರುತ್ತಿರುವುದು ಅವನ ದೃಷ್ಟಿಗೆ ಬಿದ್ದಿತು. ಆ ಕನ್ನಡಿಯನ್ನು ತೆಗೆಸಲು ಅದರ ಹಿಂದೆ ಮನುಷ್ಯ ಹೋಗಿಬರುವಂತೆ ಸುರಂಗ ಮಾರ್ಗವಿದ್ದಿತು. ಸುರಂಗದ ಹೊರಭಾಗದಲ್ಲಿ ರಾಕ್ಷಸನ ಕುದುರೆ ಲಾಯವಿರುವುದನ್ನು ತಿಳಿದನು. ಆಗ ರಾಕ್ಷಸನ ಕಡೆಯ ಭವನಪಾಲಕನಿಂದ ನೇಮಿತರಾಗಿ ಒಳಗೆ ಅಡಗಿದ್ದ ಶಸ್ತ್ರಪಾಣಿಗಳಾದ ಚೋರರು ಭೀತರಾಗಿ ಸುರಂಗಮಾರ್ಗದಿಂದ ಹೊರಗೆ ಹೋಗಲು ಯತ್ನಿಸುತ್ತಿರಲು ಅವರ ಸುಳಿವನ್ನು ತಿಳಿದ ಚಾಣಕ್ಯನು ಆ ಸುರಂಗಕ್ಕೆ ಎರಡು ಕಡೆಗಳಿಂದಲೂ ತೃಣಕಾಷ್ಠಗಳನ್ನು ತುಂಬಿಸಿ ಬೆಂಕಿ ಹತ್ತಿಸಿದನು. ಅದರಿಂದ ಎರಡು ಕಡೆಯ ಹೊಗೆಯೂ ಆಡರಿ ಬಿಲದಲ್ಲಿ ಮೃತವಾಗುವ ಹೆಗ್ಗಣಗಳಂತೆ ಅಲ್ಲಿ ಅಡಗಿದ್ದ ಚೋರರು ಮೃತರಾದರು. ಶಸ್ತ್ರಸಹಿತ ಗೂಡಿನಲ್ಲಿ ಅಡಗಿದ್ದು ನಿದ್ರೆಯಿಂದ ಮೈಮರೆತ ಚಂದ್ರಗುಪ್ತನನ್ನು ಕೊಲ್ಲಲು ಮಾಡಿದ್ದ ರಾಕ್ಷಸನ ತಂತ್ರವನ್ನು ಪತ್ತೆಹಚ್ಚಿ ಅದಕ್ಕೆ ಸಂಬಂಧಿಸಿದ ಭವನಪಾಲಕನನ್ನು ಶಿಕ್ಷಿಸುವಂತೆ ದೂತರಿಗೆ ಆಜ್ಞೆಮಾಡಿದನು. ಬಳಿಕ ಚಂದ್ರಗುಪ್ತನಿಗೆ ಕುಮಾರಭವನದಲ್ಲಿ ವಾಸಿಸುವಂತೆ ಹೇಳಿ ಆಪ್ತಜನರನ್ನು ಅವನ ಸೇವಾರ್ಥವಾಗಿ ಅಲ್ಲಿ ನಿಲ್ಲಿಸಿದನು. ತಾನು ಒಂದು ಪರ್ಣಶಾಲೆಯನ್ನು ನಿರ್ಮಿಸಿ ಶಿಷ್ಯರೊಡನೆ ಅಲ್ಲಿ ವಾಸಮಾಡುತ್ತಿದ್ದನು.

ರಾಜವೈದ್ಯನೊಬ್ಬನು ನಯವಿನಯಾದಿ ಗುಣಗಳಿಂದ ಚಂದ್ರಗುಪ್ತನನ್ನು

ಅನುಸರಿಸಿ ಅಹೋರಾತ್ರಿಗಳೆನ್ನದೆ ಅವನ ಬಳಿಯೇ ಇರುತ್ತ ದಿನೇ ದಿನೇ ನಂಬಿಕೆಯನ್ನು ಹೆಚ್ಚಿಸಿಕೊಳ್ಳುತ್ತ ಸಮಯವನ್ನು ಕಾಯುತ್ತಿದ್ದನು. ಚಾಣಕ್ಯನಿಗೆ ಅವನ ವಿಷಯದಲ್ಲಿ ಅನುಮಾನವುಂಟಾಯಿತು 'ಅರಮನೆಯಲ್ಲಿ ರಾಜವೈದ್ಯರು ಬಹುಜನರು ಇದ್ದರೂ ಅವರಲ್ಲಿ ಇವನೊಬ್ಬನು ಮಾತ್ರ ಇಲ್ಲಿಗೆ ಬಂದು ಅರಸನ್ನು ಅನುವರ್ತಿಸುತ್ತಿರುವ ನಿಮಿತ್ತವೇನು ? ಇವನನ್ನು ಪರೀಕ್ಷಿಸುವುದೇ ಲೇಸು' ಎಂದು ಭಾವಿಸಿ 'ವೈದ್ಯರೆ, ಚಂದ್ರಗುಪ್ತ ಮಹಾರಾಜರಿಗೆ ಈಚೆಗೆ ದೇಹಾರೋಗ್ಯ ಚೆನ್ನಾಗಿಲ್ಲ. ಉಷ್ಣ ಹೆಚ್ಚಾಗಿ ಜ್ವರ ಬಂದಂತಾಗಿ ಅದರಿಂದ ಆಹಾರವೇ ರುಚಿಸದೆ ಕಂಗೆಡುತ್ತಿದ್ದಾರೆ. ಒಳ್ಳೆಯ ಔಷಧವನ್ನು ಕೊಟ್ಟು ಆರೋಗ್ಯವಂತರಾಗುವಂತೆ ಮಾಡಿ.' ಎಂದು ಹೇಳಿದನು.

ವೈದ್ಯನು ಚಂದ್ರಗುಪ್ತನ ಹಸ್ತವನ್ನು ಹಿಡಿದು ನಾಡಿಯ ಗತಿಗಳನ್ನು ನೋಡಿ 'ಪಿತ್ತಾಧಿಕ್ಯದಿಂದ ಆಹಾರ ಸರಿಯಾಗಿ ಜೀರ್ಣವಾಗದೆ ಅದರಿಂದ ಅರುಚಿಯುಂಟಾಗಿದೆ, ಇದನ್ನು ಸುಲಭವಾಗಿ ಹೋಗಲಾಡಿಸಬಹುದು. ಈ ಚೂರ್ಣವನ್ನು ಸೇವಿಸಿದರೆ ಶೀಘ್ರವಾಗಿ ಗುಣವಾಗುವುದು,' ಎಂದು ಹೇಳಿ ಯೋಗಚೂರ್ಣವನ್ನು ಹೊರಗೆ ತೆಗೆದನು. ಆಗ ಚಾಣಕ್ಯನ ಸೂಚನೆಯಂತೆ ಶಿಷ್ಯನು ವಿಷಚುಂಬಿನಿಯೆಂಬ ಶಿಲೆಯಿಂದ ನಿರ್ಮಿತವಾದ ಬಟ್ಟಲನ್ನು ತಂದಿಟ್ಟನು. ಆ ವೈದ್ಯನು ಅದನ್ನು ತಿಳಿಯದೆ ಚೂರ್ಣವನ್ನು ಅದರಲ್ಲಿ ಹಾಕಿ ಸ್ವಲ್ಪ ನೀರನ್ನು ಬಿಡಲು ಆ ಪುಡಿಯು ಶಿಲಾಸ್ಪರ್ಶವಾದೊಡನೆ ವಿವರ್ಣವಾಗಿ ನೊರೆಕಟ್ಟಿ ಕುದಿದು ಸುತ್ತುತ್ತಿರಲು ಚಾಣಕ್ಯನು ಆ ಬಟ್ಟಲನ್ನು ತಲೆ ಕೆಳಗಾಗುವಂತೆ ಮಗುಚಿ ನೋಡಿದನು. ಒಂದು ತೊಟ್ಟೂ ಕೆಳಗೆ ಬೀಳದಿರಲು ಅದು ವಿಷಚೂರ್ಣವೆಂಬುದನ್ನು ಗ್ರಹಿಸಿದನು. ಅದೂ ರಾಕ್ಷಸನ ತಂತ್ರವೆಂಬುದು ಅವನಿಗೆ ಅರಿವಾಯಿತು. 'ಪಂಡಿತನೆ, ಈ ಔಷಧವು ಬೇಗನೆ ಉಪದ್ರವವನ್ನು ಶಮನಮಾಡುವಂತೆ ತೋರುತ್ತಿದೆ. ಆದರೂ ವೈದ್ಯರನ್ನೂ ಪಾಚಕರನ್ನೂ ಪರೀಕ್ಷಿಸದೆ ಪ್ರಭುವಾದವನು ಪರಿಗ್ರಹಿಸಕೂಡದೆಂಬ ನಿಯಮವುಂಟು. ಆದಕಾರಣ ಈಗ ಈ ಔಷಧಿಯನ್ನು ನೀವು ಸೇವಿಸಿ. ನಿಮ್ಮ ಶರೀರಕ್ಕೆ ಅನುಗುಣವಾದುದನ್ನು ನೋಡಿ ನಾಳೆ ಚಂದ್ರಗುಪ್ತನು ತೆಗೆದುಕೊಳ್ಳಲಿ.' ಎಂದು ನೇಮಿಸಿದನು. ಆ ರಾಜವೈದ್ಯನು ಆ ಮಾತನ್ನು

ಮೀರಲಾರದೆ ಆ ಔಷಧವನ್ನು ಪಾನಮಾಡಿದನು. ಚಾಣಕ್ಯನು ಅವನನ್ನು ಮನೆಗೆ ಕಳುಹಿಸಿ ಅವನ ಹಿಂದೆ ಒಬ್ಬ ದೂತರನ್ನು ಕಳುಹಿಸಿ ಏನು ನಡೆಯುವುದೋ ತಿಳಿದುಬಾರೆಂದು ಆಜ್ಞಾಪಿಸಿದನು. ಆ ದೂತನು ಹಿಂದಿರುಗಿ ಬಂದು ವೈದ್ಯನು ಮೃತನಾದ ಸಂಗತಿ ತಿಳಿಸಿದನು.

(ಬಳಿಕ ಚಾಣಕ್ಯನು ತನ್ನ ಆಪ್ತ ಗೂಢಚಾರರಿಗೆ 'ನೀವು ಸಮಯೋಚಿತವಾದ ವೇಷಭಾಷೆಗಳನ್ನು ವಹಿಸಿ ಈ ಪಟ್ಟಣದಲ್ಲಿ ರಾಕ್ಷಸನ ಕಡೆಯವರು ಯಾರಿದ್ದಾರೆ? ಅವರ ಚಲನವಲನಗಳೇನು? ರಾಕ್ಷಸನು ಹೆಂಡತಿ ಮಕ್ಕಳನ್ನು ಯಾರ ಬಳಿ ಬಿಟ್ಟುಹೋಗಿದ್ದಾನೆ? ಅವನು ಈಗ ಎಲ್ಲಿದ್ದಾನೆ? ಏನು ಮಾಡುತ್ತಿದ್ದಾನೆ? ಈ ನಗರದಲ್ಲಿ ಚಂದ್ರಗುಪ್ತನನ್ನು ದ್ವೇಷಿಸುವವರು ಯಾರಿದ್ದಾರೆ? ಇವೇ ಮೊದಲಾದ ಸಂಗತಿಗಳನ್ನು ತಿಳಿದು ಹೇಳುವಂತೆ ಆಜ್ಞೆಮಾಡಿ ಕಳುಹಿಸಿದನು.)

ನಂದರ ಮರಣದಿಂದ ಸರ್ವಾರ್ಥಸಿದ್ಧಿರಾಜನ ಮನಸ್ಸು ಬಹಳ ವ್ಯಾಕುಲಕ್ಕೊಳಗಾಯಿತು. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪೋಧನರೊಡನೆ ಇದ್ದುಕೊಂಡು ಯೋಗಮಾರ್ಗದಿಂದ ದೇಹತ್ಯಾಗಮಾಡುವುದೇ ಲೇಸೆಂದು ಯೋಚಿಸಿದನು. ಸುನಂದಾದೇವಿಯೂ ಅದಕ್ಕೆ ಒಪ್ಪಿದಳು. ಒಂದು ದಿನ ಅವರು ಕ್ಷ್ನಾನುಕನೆಂಬ ಬೀಸಣಿಗೆಯ ಸೇವಕನನ್ನೂ ಒಬ್ಬಳು ದಾದಿಯನ್ನೂ ಸಂಗಡ ಕರೆದುಕೊಂಡು ಯಾರಿಗೂ ತಿಳಿಯದಂತೆ ಅಂತಃಪುರದ ಸುರಂಗಮಾರ್ಗದಿಂದ ಹೊರಟು ಅರಣ್ಯಮಾರ್ಗವಾಗಿ ತೆರಳಿದರು. ಒಂದು ಋಷ್ಯಾಶ್ರಮದಲ್ಲಿ ನಿಂತು ಅಲ್ಲಿ ತಪಸ್ವಿಗಳ ಸೇವೆಮಾಡಿಕೊಂಡು ಆಶ್ರಮವಾಸಿಗಳಂತೆ ಜೀವಿಸುತ್ತ ಪುತ್ರಶೋಕವನ್ನು ಮರೆತು ಮುಕ್ತಿಮಾರ್ಗವನ್ನು ಹಿಡಿದಿದ್ದರು. ಒಂದು ದಿನ ದೊರೆಯು ಗಂಗಾಸ್ನಾನಮಾಡಿ ಸೂರ್ಯನಮಸ್ಕಾರ ಮಾಡುತ್ತಿದ್ದ ಸಮಯದಲ್ಲಿ ಆಕಾಶದಲ್ಲಿ ಸೋಪಾನಪಂಕ್ತಿಯೂ ಸುವರ್ಣವೃಕ್ಷಸಮೂಹವೂ ಕಾಣಿಸಲು ಆತನು ತನ್ನ ಆಯುಷ್ಯವು ಮುಗಿಯಿತೆಂದು ನಿಶ್ಚಯಿಸಿದನು. ಬಳಿಕ ನಿತ್ಯಕರ್ಮಗಳನ್ನು ಮುಗಿಸಿ, ರುದ್ರಾಕ್ಷಿಗಳನ್ನು ಧರಿಸಿ, ಗುರುಗಳು ಉಪದೇಶಿಸಿದ ಯೋಗರಹಸ್ಯವನ್ನು ತಿಳಿದು ಶ್ವಾಸವನ್ನು ಬಂಧಿಸಿ, ನಿರ್ವಿಕಲ್ಪ ಬ್ರಹ್ಮನಲ್ಲೇ ಚಿತ್ತವಿಟ್ಟು ಯೋಗಾರೂಢನಾಗಿ ಕುಳಿತನು. ಪ್ರಾಣವಾಯುವು ನೆತ್ತಿಯನ್ನು ಭೇದಿಸಿಕೊಂಡು ಬ್ರಹ್ಮನಲ್ಲಿ ಲೀನವಾಗಿ ಮುಕ್ತಿಯನ್ನು ಪಡೆದನು.

ಚಾಣಕ್ಯನ ಆಜ್ಞೆಯಂತೆ ವೃದ್ಧಮಹಾರಾಜನ ಮರಣವನ್ನು ಕಾಯುತ್ತಿದ್ದ ದೂತರು ರಾಜನು ಮೃತನಾಗಿರುವುದನ್ನು ತಿಳಿದು ಗುರುತಿಗೆಂದು ಅವನ ಜಪಮಾಲೆಯನ್ನು ತೆಗೆದುಕೊಂಡು ಹೋಗಿ ಚಾಣಕ್ಯನಿಗೆ ಒಪ್ಪಿಸಿ ಸರ್ವಾರ್ಥಸಿದ್ಧಿರಾಯನು ಮರಣಹೊಂದಿದ ಸಂಗತಿಯನ್ನು ತಿಳಿಸಿದರು. ಅದನ್ನು ಕೇಳಿ ಚಂದ್ರಗುಪ್ತನು ಬಹಳ ಮರುಗಿದನು. ಸುನಂದಾದೇವಿಯು ಪತಿಯ ಮರಣವನ್ನು ತಿಳಿದು ಮೂರ್ಛಿತಳಾಗಿ, ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು ಗೌರಿಯನ್ನು ಪೂಜಿಸಿ ತನ್ನಲ್ಲಿದ್ದ ವಸ್ತುಗಳನ್ನು ಋಷಿಪತ್ನಿಯರಿಗೆ ದಾನಮಾಡಿ ಬಳಿಕ ಅಗ್ನಿಪ್ರವೇಶಮಾಡಿ ಪುಣ್ಯಲೋಕವನ್ನು ಸೇರಿದಳು. ಕ್ಷ್ಣಾಮಕನು ಆ ಬಳಿಕ ಆಶ್ರಮವನ್ನು ತ್ಯಜಿಸಿ ನಗರಾಭಿಮುಖವಾಗಿ ಬರುತ್ತಿದ್ದನು.

ಅಮಾತ್ಯರಾಕ್ಷಸನಿಂದ ನಿಯುಕ್ತನಾಗಿದ್ದ ವಾಸಕನೆಂಬ ಗೂಢಚಾರನು ತನಗೆ ದಾರಿಯಲ್ಲಿ ಸಿಕ್ಕಿದ ಕ್ಷ್ಣಾಮಕನಿಂದ ವೃದ್ಧರಾಜದಂಪತಿಗಳು ಸ್ವರ್ಗಸ್ಥರಾದ ಸಂಗತಿಯನ್ನು ತಿಳಿದು, ಗೊತ್ತಾದ ವನದಲ್ಲಿದ್ದ ಅಮಾತ್ಯನನ್ನು ಕಂಡು ಆ ಸಂಗತಿಯನ್ನು ತಿಳಿಸಿದನು. ಆ ಮರಣ ವೃತ್ತಾಂತವನ್ನು ಕೇಳಿ ರಾಕ್ಷಸನು ಬಹಳ ಸಂತಾಪಕ್ಕೊಳಗಾದನು.

ಸ್ವಲ್ಪ ಹೊತ್ತಿನ ಮೇಲೆ ವಾಸಕನು ಅಮಾತ್ಯನಿಗೆ 'ಸ್ವಾಮಿ, ತಾವು ಪುರವನ್ನು ತ್ಯಜಿಸಿ ಬಂದ ಬಳಿಕ ಜೀವಸಿದ್ಧಿಯೆಂಬ ಕ್ಷಪಣಕನು ಒಬ್ಬ ಕನ್ಯೆಯನ್ನು ಕರೆತಂದು ಚಂದ್ರಗುಪ್ತನಿಗೆ ಒಪ್ಪಿಸಿದನು. ಆಗ ಅಲ್ಲಿದ್ದ ಚಾಣಕ್ಯನು ಅವಳನ್ನು ನೋಡಿ ಏನನ್ನೋ ಮನಸ್ಸಿನಲ್ಲಿ ಯೋಚಿಸಿ ಜೀವಸಿದ್ಧಿಗೆ--ಈ ಕನ್ಯೆಯು ಪರ್ವತರಾಜನಿಗೆ ಸಲ್ಲತಕ್ಕವಳು. ಇವಳನ್ನು ಅವನಿಗೆ ಒಪ್ಪಿಸು--ಎಂದು ಹೇಳಿದನು. ಆ ಕ್ಷಪಣಕನು ಅವಳನ್ನು ಕರೆತಂದು ಪರ್ವತರಾಜನಿಗೆ ಒಪ್ಪಿಸಲು ಅವಳ ದೆಸೆಯಿಂದ ಪರ್ವತೇಶ್ವರನು ಮೃತನಾದನು. ಆ ಸಮಯದಲ್ಲಿ ತನ್ನ ಬಿಡಾರದ ಕಡೆ ಬರುತ್ತಿದ್ದ ಚಂದ್ರಗುಪ್ತನ ಸೇನೆಯನ್ನು ಕಂಡು ಮಲಯಕೇತುವು ಭೀತನಾಗಿ ಓಡಿಹೋದನು. ಸಂಗತಿ ಹೀಗಿದ್ದರೂ ಚಾಣಕ್ಯನು ಕೃತಕ ವ್ಯಸನವನ್ನು ತೋರ್ಪಡಿಸುತ್ತ ತನಗೆ ಬರಬೇಕಾಗಿದ್ದ ಅಪವಾದವನ್ನು ಮತ್ತೊಬ್ಬರ ಮೇಲೆ ಹೊರಿಸುವುದರಲ್ಲಿ ಸಮರ್ಥನಾಗಿದ್ದಂತೆ ತೋರುತ್ತಿದೆ.' ಎಂದು ವಿಜ್ಞಾಪಿಸಿಕೊಂಡನು.

"ಆಹಾ! ನಾನು ಮಾಡಿದ ಮಹಾಪ್ರಯತ್ನ ವಿಫಲವಾಯಿತು.

ಚಂದ್ರಗುಪ್ತನ ಸಂಹಾರಕ್ಕಾಗಿ ನಾನು ಕಳುಹಿಸಿದ ವಿಷಕನ್ಯೆಯಿಂದ ಚಾಣಕ್ಯನು ಪರ್ವತರಾಜನನ್ನು ಮರಣಕ್ಕೆ ಗುರಿಮಾಡಿ ಚಂದ್ರಗುಪ್ತನನ್ನು ರಕ್ಷಿಸಿದನು. ಈ ಮಹಾಪ್ರಯತ್ನವೇ ಹೀಗಾದಮೇಲೆ ಉಳಿದ ಅಲ್ಪ ಪ್ರಯತ್ನಗಳು ಚಾಣಕ್ಯನ ಮುಂದೆ ಫಲಕಾರಿಯಾಗುವುದು ಸಂಶಯವೆ! ಇರಲಿ. ಇನ್ನೂ ಸಾಹಸಮಾಡಿ ಪಿತೃವಿಯೋಗದಿಂದ ದುಃಖಿತನಾಗಿ ಪುರಕ್ಕೆ ಬಂದಿರುವ ಚಂದ್ರಗುಪ್ತನ ವೈರಿಯಾದ ಮಲಯಕೇತುವನ್ನು ಆಶ್ರಯಿಸಿ, ಅವನನ್ನು ಪ್ರೋತ್ಸಾಹಿಸಿ, ಅವನ ಸೇನೆಯೊಡನೆ ಪಾಟಲೀಪುರವನ್ನು ಮುತ್ತುವೆನು. ಚಂದ್ರಗುಪ್ತಚಾಣಕ್ಯರ ಗರ್ವವನ್ನು ಮುರಿದು ನಂದರಾಜ್ಯವನ್ನು ಮಲಯಕೇತುವಿನ ವಶಮಾಡುವೆನು. ಚಂದ್ರಗುಪ್ತನ ಅಭ್ಯುದಯವನ್ನು ಮಾತ್ರ ಎಂದಿಗೂ ಸಹಿಸೆನು." ಎಂದು ರಾಕ್ಷಸನು ನಿಶ್ಚಯಿಸಿದನು. ತನ್ನಲ್ಲಿಗೆ ಬಂದ ಪರಿವಾರದೊಡನೆ ಶಾಹುರೀನಗರದ ಕಡೆ ಹೊರಟನು.

## ಪರ್ವತರಾಜ್ಯದಲ್ಲಿ

ಅಮಾತ್ಯನು ಶಾಹುರೀನಗರವನ್ನು ತಲುಪಿದನು. ನಗರದ ಉದ್ಯಾನದಲ್ಲಿ ಅವನು ಬಂದು ಇಳಿದಿರುವ ಸಂಗತಿಯನ್ನು ಚಾರರು ಬಂದು ಬಾಗುರಾಯಣನಿಗೆ ತಿಳಿಸಿದರು. ಬಾಗುರಾಯಣನು--ಚಾಣಕ್ಯರ ಮುಂದಾಲೋಚನೆಯು ಶ್ಲಾಘ್ಯವಾದುದೇ ಸರಿ. ಅವರು ಯೋಚಿಸಿದ್ದಂತೆ ರಾಕ್ಷಸನು ಮಲಯಕೇತುವನ್ನು ಆಶ್ರಯಿಸಿ ಕಾರ್ಯಸಾಧನೆ ಮಾಡಲು ಬಂದಿದ್ದಾನೆ. ಚಾಣಕ್ಯರು ಅದಕ್ಕಾಗಿಯೇ ನನಗೆ ಕಾಗದ ಬರೆದು ಮಲಯಕೇತುವಿನ ಬಳಿ ಆಪ್ತನಂತೆ ಇರುವಂತೆ ತಿಳಿಸಿದ್ದು. ಈಗ ಇವರ ಸ್ನೇಹಕ್ಕೆ ವಿರೋಧ ಸೂಚಿಸದೆ ಮುಂದೆ ಸಕಾಲದಲ್ಲಿ ಮಲಯಕೇತುವಿಗೆ ರಾಕ್ಷಸನ ಮೇಲೆ ವಿರೋಧವುಂಟಾಗುವಂತೆ ಮಾಡಿ ರಾಕ್ಷಸನನ್ನು ಮಲಯಕೇತುವಿನಿಂದ ಹೊರಡಿಸಬೇಕು—ಎಂದು ಯೋಚಿಸಿದನು.

ರಾಕ್ಷಸನು ಬಂದಿರುವ ಸಂಗತಿಯನ್ನು ತಿಳಿದು ಮಲಯಕೇತುವು ಅವನನ್ನು ಆದರದಿಂದ ಬರಮಾಡಿಕೊಂಡನು. ಅವನು ಸಮಯವನ್ನು ನೋಡಿ 'ರಾಜಕುಮಾರ, ಚಾಣಕ್ಯನು ನಂಬಿಸಿ ನಿಮ್ಮ ತಂದೆಯನ್ನು ಕರೆದುಕೊಂಡು ಹೋಗಿ ಮೋಸದಿಂದ ನಂದರನ್ನು ಕೊಂದು, ತಾನು ವಾಗ್ದಾನಮಾಡಿದಂತೆ

ಅರ್ಧರಾಜ್ಯವನ್ನು ನಿಮಗೆ ಕೊಡಬೇಕಾಗುವುದಲ್ಲಾ ಎಂಬ ಲೋಭಬುದ್ಧಿಯಿಂದ ವಿಷಕನ್ಯೆಯ ಮೂಲಕ ನಿಮ್ಮ ತಂದೆಯನ್ನು ಕೊಲ್ಲಿಸಿದನು. ಅರ್ಧರಾಜ್ಯವನ್ನು ನಿಮಗೂ ಕೊಡದೆ ವಂಚಿಸಿದನು. ಇಂಥ ವಂಚಕರನ್ನು ಏನು ಮಾಡಿದರೂ ತೀರದು. ಅವರ ದ್ರೋಹಕ್ಕೆ ಪ್ರತೀಕಾರಮಾಡಲು ನೀವು ಮನಸ್ಸು ಮಾಡಬೇಕು. ಪಾಟಲೀಪುರದಲ್ಲಿ ನನಗಿರುವಷ್ಟು ಪ್ರಜಾಬೆಂಬಲ ಮತ್ತಾರಿಗೂ ಇರಲು ಸಾಧ್ಯವಿಲ್ಲ. ನನ್ನಿಂದ ನಿಯುಕ್ತರಾಗಿರುವ ಕೆಲವರು ಕಪಟದಿಂದ ಚಂದ್ರಗುಪ್ತನನ್ನು ಕೊಲ್ಲಲು ಸಮಯಕಾಯುತ್ತಿದ್ದಾರೆ. ಈ ಸಮಯದಲ್ಲಿ ನೀನು ಸೈನ್ಯಸಮೇತನಾಗಿ ನನ್ನ ಸಹಾಯಕ್ಕೆ ಬಂದರೆ ಆ ಚಂದ್ರಗುಪ್ತನನ್ನು ಕೊಂದು ನಂದರಾಜ್ಯವನ್ನು ನಿನಗೆ ಕೊಡಿಸುತ್ತೇನೆ. ಅದರಿಂದ ಪರಲೋಕದಲ್ಲಿರುವ ನನ್ನ ಪ್ರಭುಗಳಾದ ನಂದರಿಗೆ ಸಂತೋಷವಾದರೆ ನನಗೆ ಅಷ್ಟೇ ಸಾಕು. ಯಾವ ಸ್ವಾರ್ಥಕ್ಕಾಗಿಯೂ ನಾನು ಇಲ್ಲಿಗೆ ಬಂದಿಲ್ಲ.' ಎಂದು ತಿಳಿಸಿದನು.

ಅಮಾತ್ಯರಾಕ್ಷಸನ ಮಾತು ಮಲಯಕೇತುವಿಗೆ ಹಿತವೆನಿಸಿತು. ಹೇಗಾದರೂ ಆ ರಾಕ್ಷಸನ ಸಹಾಯದಿಂದ ದ್ರೋಹಿಗಳಾದ ಚಾಣಕ್ಯ ಚಂದ್ರಗುಪ್ತರನ್ನು ನಿಗ್ರಹಿಸಿ ಪಿತೃವಧೆಯಿಂದ ಉಂಟಾಗಿರುವ ತನ್ನ ಒಡಲುರಿಯನ್ನು ತಗ್ಗಿಸಿಕೊಳ್ಳಬೇಕೆಂದು ಮನಸ್ಸುಮಾಡಿದನು. ಅದರಂತೆ ರಾಕ್ಷಸನಿಗೆ ತನ್ನ ರಾಜ್ಯದಲ್ಲಿ ಸರ್ವಾಧಿಕಾರವನ್ನು ವಹಿಸಿಕೊಟ್ಟು ಅಧಿಕಾರಿಗಳೂ ಸೇನಾಪತಿಗಳೂ ಸಾಮಂತರಾಜರೂ ಅವನ ಮಾತಿನಂತೆ ನಡೆಯಬೇಕೆಂದು ಆಜ್ಞೆಮಾಡಿದನು. ಬೊಕ್ಕಸದಿಂದ ಅನರ್ಘ್ಯವಾದ ಆಭರಣಗಳನ್ನು ತರಿಸಿ ಅಮಾತ್ಯನು ಅವುಗಳನ್ನು ಧರಿಸುವಂತೆ ಕೇಳಿಕೊಂಡನು. ಕಾರ್ಯವಾಗದೆ ಅವುಗಳನ್ನು ಧರಿಸುವುದು ಅವನಿಗೆ ಇಷ್ಟವಿಲ್ಲವಾಗಿದ್ದರೂ ರಾಜಕುಮಾರನ ಬಲವಂತಕ್ಕೆ ರಾಕ್ಷಸನು ಅವುಗಳನ್ನು ಧರಿಸಿದನು. ಅವನು ಪರ್ವತರಾಜ್ಯದಲ್ಲಿ ನಿಂತು ಮುಂದಿನ ಪಾಟಲೀಪುರದ ಮುತ್ತಿಗೆಗಾಗಿ ಸನ್ನದ್ಧನಾಗುತ್ತಿದ್ದನು.

ಅತ್ತ ರಾಕ್ಷಸನ ವರ್ತಮಾನವನ್ನು ತಿಳಿಯಲು ಹೋಗಿದ್ದ ಚಾಣಕ್ಯನ ಗೂಢಚಾರ ಸಮಿದ್ಧಕನು ಬಂದು ರಾಕ್ಷಸನು ಮಲಯಕೇತುವಿನ ಆಶ್ರಯ ಪಡೆದಿರುವುದನ್ನೂ ಅಲ್ಲಿಯ ವಿಶೇಷವರ್ತಮಾನಗಳನ್ನೂ ಚಾಣಕ್ಯನಿಗೆ ತಿಳಿಸಿದನು. ಅದನ್ನು ಕೇಳಿ ಚಾಣಕ್ಯನು ಮನಸ್ಸಿನಲ್ಲಿ 'ರಾಕ್ಷಸನು ತನ್ನ

ಕಪಟೋಪಾಯಗಳು ಭಗ್ನವಾಗಲು ಮತ್ತೂ ದ್ವೇಷವನ್ನು ಸಾಧಿಸಲು ಮಲಯಕೇತುವನ್ನು ಆಶ್ರಯಿಸಿ ಯುದ್ಧಕ್ಕೆ ಬರುವವನಿದ್ದಾನೆ. ಅವನು ಮಲಯಕೇತುವಿನಿಂದ ತಿರಸ್ಕೃತನಾಗಿ ತಾನಾಗಿ ಇಲ್ಲಿಗೆ ಬರುವಂತೆ ತಕ್ಕ ಉಪಾಯವನ್ನು ಮಾಡಬೇಕು.' ಎಂದು ಯೋಚಿಸಿ ಸಮಿದ್ಧಕನನ್ನು ಮತ್ತೆ ಪರ್ವತರಾಜ್ಯಕ್ಕೆ ವಿಶೇಷ ಸಂಗತಿಗಳನ್ನು ತಿಳಿದು ಬರಲು ಕಳುಹಿಸಿದನು.

ಬಳಿಕ ರಾಜದೂತರನ್ನು ಕರೆದು "ಭದ್ರಭಟಾದಿ ಸೇನಾಪತಿಗಳು ಇದುವರೆಗೆ ರಾಜದರ್ಶನಕ್ಕೆ ಬರದೇ ಇರುವುದರಿಂದ ಅವರ ವಿಷಯದಲ್ಲಿ ನಮಗೆ ಸಂಶಯವುಂಟಾಗಿದೆ. ಚಂದ್ರಗುಪ್ತನ ಅಭ್ಯುದಯ ಅವರಿಗೆ ಇಷ್ಟವಿದ್ದಂತೆ ಕಾಣುವುದಿಲ್ಲ. ಆದುದರಿಂದ ನೀವು ಅವರ ಬಳಿಗೆ ಹೋಗಿ 'ಚಂದ್ರಗುಪ್ತ ಮಹಾರಾಜರ ಆಜ್ಞೆಯಂತೆ ನಿಮ್ಮನ್ನು ಅಧಿಕಾರದಿಂದ ತೆಗೆದುಹಾಕಿದೆ. ನೀವು ಕೂಡಲೆ ಈ ದೇಶವನ್ನು ಬಿಟ್ಟು ಹೊರಡತಕ್ಕದ್ದು. ಇಲ್ಲದೇ ಹೋದರೆ ಕಾರಾಗೃಹಪ್ರಾಪ್ತಿಯಾಗುವುದು.' ಎಂದು ಹೇಳಿರಿ" ಎಂದು ಆಜ್ಞೆಮಾಡಿದನು. ಮನೆಗೆ ಬಂದು ಸಿದ್ಧಾರ್ಥಕನನ್ನು ಕರೆದು ಅವನ ಕಿವಿಯಲ್ಲಿ ಏನೋ ಹೇಳಿ ಕಳುಹಿಸಿದನು.

ಅದರಂತೆ ಸಿದ್ಧಾರ್ಥಕನು ಬೊಕ್ಕಸದ ಅಧಿಕಾರಿಯಾದ ರುಕ್ಮನನ್ನು ಕಂಡು ಚಾಣಕ್ಯನು ಹೇಳಿದ ಮೇರೆಗೆ ಪರ್ವತರಾಜ್ಯದಲ್ಲಿರುವ ತಮ್ಮ ಕಡೆಯ ವರ್ತಕರಿಗೆ ಭದ್ರಭಟಾದಿ ಸೇನಾನಾಯಕರು ಅಲ್ಲಿಗೆ ಬಂದಾಗ ಅವರಿಗೆ ಕೇಳಿದಷ್ಟು ಹಣ ಕೊಡುವಂತೆ ಅವನಿಂದ ಹುಂಡಿಯ ಕಾಗದ ಬರೆಸಿದನು. ಅದನ್ನು ತೆಗೆದುಕೊಂಡು ಹೋಗಿ ಗುಪ್ತವಾಗಿ ಭದ್ರಭಟಾದಿಗಳನ್ನು ಕಂಡು ಚಾಣಕ್ಯನು ಹೇಳಿದುದನ್ನು ಅವರಿಗೆ ತಿಳಿಸಿ ಆ ಹುಂಡಿಯ ಕಾಗದವನ್ನು ಅವರ ವಶಕ್ಕೆ ಕೊಟ್ಟನು. ಅವರೆಲ್ಲರೂ ಶಿರಸಾವಹಿಸಿ, ಸೂಚಿಸಿದ ಕೆಲಸವನ್ನು ನಿರ್ವಹಿಸುತ್ತೇವೆಂದು ತಮ್ಮ ತಮ್ಮ ಹಸ್ತಾಕ್ಷರಗಳಿಂದ ಕಾಗದ ಬರೆದುಕೊಟ್ಟರು. 'ನೀವು ಮಲಯಕೇತುವನ್ನು ಆಶ್ರಯಿಸಿ ಮೊದಲೇ ಅಲ್ಲಿ ಸೇರಿರುವ ಬಾಗುರಾಯಣನು ಹೇಳಿದಂತೆ ಇದ್ದುಕೊಂಡು ಸಮಯ ಒದಗಿದಾಗ ಚಂದ್ರಗುಪ್ತನಿಗೆ ಅನುಕೂಲರಾಗಿರಿ.' ಎಂದು ಚಾಣಕ್ಯನು ಹೇಳಿದ ಮಾತನ್ನು ಮತ್ತೊಮ್ಮೆ ಚಮೂಪತಿಗಳಿಗೆ ತಿಳಿಸಿ ಅವರು ಕೊಟ್ಟ ಪತ್ರವನ್ನು ತಂದು ಚಾಣಕ್ಯನಿಗೆ ಒಪ್ಪಿಸಿದನು.

ರಾಜ ದೂತರು ಆ ಸೇನಾಪತಿಗಳ ಮನೆಯ ಬಾಗಿಲಲ್ಲಿ ನಿಂತು

ಚಾಣಕ್ಯನು ಹೇಳಿದ ರಾಜಾಜ್ಞೆಯನ್ನು ಪ್ರಕಟವಾಗಿ ತಿಳಿಸಿದರು. ಅವರು ರಾಜಾಪರಾಧಮಾಡಿ ಭಯಗೊಂಡವರಂತೆ ನಟಿಸುತ್ತ ತಮಗೆ ಅಗತ್ಯ ವಾದಷ್ಟು ಸೈನ್ಯವನ್ನು ತೆಗೆದುಕೊಂಡು ಪಾಟಲೀಪುರವನ್ನು ತ್ಯಜಿಸಿದರು. ಕೆಲವು ದಿನಗಳಲ್ಲಿ ಪರ್ವತರಾಜ್ಯವನ್ನು ತಲುಪಿದರು. ಚಂದ್ರಗುಪ್ತನ ಆಗ್ರ ಹಕ್ಕೆ ಪಾತ್ರರಾಗಿ ಅಲ್ಲಿಂದ ಹೊರಡಿಸಲ್ಪಟ್ಟವರೆಂದು ಮಲಯಕೇತುವಿಗೆ ನಂಬಿಕೆಯುಂಟಾಗುವಂತೆ ವರ್ತಿಸಿ ಬಾಗುರಾಯಣನ ಸಹಾಯದಿಂದ ಪರ್ವತ ರಾಜಪುತ್ರನ ಆಶ್ರಯದಲ್ಲಿ ನಿಂತರು. ಆ ಸಮಯದಲ್ಲಿ ಅಮಾತ್ಯರಾಕ್ಷಸನು ಅವರು ಚಾಣಕ್ಯನಿಂದ ಪ್ರೇರಿತರಾಗಿ ಕಪಟವನ್ನು ಎಣಿಸಲು ಬಂದಿದ್ದರೂ ಬಂದಿರಬೇಕೆಂದು ಶಂಕಿಸಿದರೂ ಅವರನ್ನು ಬೇರೆ ಕಡೆಗೆ ಹೋಗದಂತೆ ಅಲ್ಲಿಯೇ ಇಟ್ಟುಕೊಳ್ಳುವುದು ಪ್ರಕೃತದಲ್ಲಿ ಲೇಸೆಂದು ಭಾವಿಸಿ ಸಮ್ಮತಿಸಿದನು. ಅವರು ಯಾವ ಕಾರ್ಯದಲ್ಲಿ ನಿಯುಕ್ತರಾಗಿರಬೇಕೆಂಬುದನ್ನು ತಿಳಿಸಿ, ಅವರ ವರ್ತನೆ ಯನ್ನು ಎಚ್ಚರದಿಂದ ಗಮನಿಸುತ್ತಿದ್ದನು. ಸಮಿದ್ಧಕ ಗೂಢಚಾರನು ಪಾಟಲೀ ಪುರಕ್ಕೆ ಬಂದು ಭದ್ರಭಟಾದಿಗಳು ಮಲಯಕೇತುವಿನ ಆಶ್ರಯದಲ್ಲಿ ನಿಂತ ಸಂಗತಿಯನ್ನು ಚಾಣಕ್ಯನಿಗೆ ತಿಳಿಸಿದನು.

## ಮುದ್ರಿಕಾ ಸಂಗ್ರಹಣ

ಮತ್ತೊಂದು ದಿನ ಮರಾಳನೆಂಬ ಮತ್ತೊಬ್ಬ ಗೂಢಚಾರನು ಗುಪ್ತವಾಗಿ ಚಾಣಕ್ಯನನ್ನು ಕಂಡನು. ಚಾಣಕ್ಯನು ಅವನಿಂದ ವಿಷಯಗಳನ್ನು ಕೇಳಿದನು.

"ಮರಾಳ, ಈ ನಗರದಲ್ಲಿ ಚಂದ್ರಗುಪ್ತನ ವಿರೋಧಿಗಳು ಯಾರು? ಯಾರಿಗೆ ಅವನಲ್ಲಿ ಅನುರಾಗವುಂಟು ತಿಳಿದುಬಂದೆಯಾ?"

"ಸ್ವಾಮಿ, ಈ ಪುರದಲ್ಲಿ ಮೂವರ ಹೊರತು ಉಳಿದವರೆಲ್ಲರೂ ಚಂದ್ರ ಗುಪ್ತನಲ್ಲಿ ಅನುರಕ್ತರಾಗಿರುವರು."

"ಹಾಗಾದರೆ ಆ ಮೂವರು ಯಾರು?"

"ರಾಕ್ಷಸನಿಗೆ ಮಿತ್ರನಾಗಿದ್ದ ಜೀವಸಿದ್ಧಿಯೆಂಬ ಕ್ಷಪಣಕನೊಬ್ಬನು. ಅಮಾತ್ಯನ ರಾಯಸದವನಾಗಿದ್ದ ಶಕಟದಾಸನು ಮತ್ತೊಬ್ಬನು. ಮೂರನೆ ಯವನು ರಾಕ್ಷಸನ ಪರಮಮಿತ್ರನಾದ ವರ್ತಕ ಚಂದನದಾಸನು. ರಾಕ್ಷಸನು ತನ್ನ ಹೆಂಡತಿಮಕ್ಕಳನ್ನು ಈ ವರ್ತಕಶ್ರೇಷ್ಠನ ಬಳಿಯೇ ಬಿಟ್ಟುಹೋಗಿದ್ದಾನೆ.

"ಮರಾಳ, ನೀನು ಹೇಳಿದ ಕಡೆಯ ಮಾತು ದಿಟವೆ? ಅವರು ಅಲ್ಲಿರುವ ರೆಂಬುದನ್ನು ನೀನು ಹೇಗೆ ತಿಳಿದೆ?"

"ಸ್ವಾಮಿ, ನಾನು ಈ ಚಿತ್ರಪಟಗಳನ್ನು ತೆಗೆದುಕೊಂಡು--ಇದು ಸ್ವರ್ಗವು; ಸುಕೃತಿಗಳಿಗೆ ಮಾತ್ರ ಲಭಿಸತಕ್ಕದ್ದು. ಇದು ನರಕವು; ಪಾಪಿಗಳನ್ನು ದಂಡಿಸುವ ಲೋಕ--ಎಂದು ಹೇಳಿಕೊಂಡು ಪ್ರತಿ ಗೃಹದ ಬಳಿಯೂ ನಿಂತು ಗಾನಮಾಡುತ್ತಾ ಪಟಗಳನ್ನು ತೋರಿಸುತ್ತಾ ಚಂದನದಾಸನ ಮನೆಯ ಬಳಿಗೆ ಹೋದೆನು. ಅಲ್ಲಿ ಚಿತ್ರಪಟಗಳನ್ನು ತೋರಿಸುತ್ತಿದ್ದಾಗ ಐದು ವರ್ಷ ವಯಸ್ಸಿನ ಆಕಾರದಲ್ಲಿ ರಾಕ್ಷಸನ ಹೋಲಿಕೆಯಿದ್ದ ರೂಪವಂತನಾದ ಹುಡುಗನು ಮನೆಯೊಳಗಿನಿಂದ ಓಡಿಬಂದು ಪಟಗಳ ಬಳಿ ನಿಂತನು. ಆಗ ಒಬ್ಬ ರೂಪವತಿಯಾದ ಸ್ತ್ರೀಯು ಅಂತರ್ಗೃಹದ ಬಾಗಿಲ ಬಳಿ ನಿಂತು ಸನ್ನೆ ಮಾಡಿ ಮಗುವನ್ನು ಕರೆದರೂ ಮಗು ಹೋಗದೆ ಅಲ್ಲಿಯೇ ನಿಂತಿರಲು, ಆಕೆ ತ್ವರಿತದಿಂದ ಬಂದು ಬಾಲಕನನ್ನು ಹಿಡಿದೆಳೆದಳು. ಆಗ ನಾನು ಇಲ್ಲಿ ಏನೋ ವಿಶೇಷವಿರಬೇಕೆಂದು ಯೋಚಿಸಿ, ಅಮಾತ್ಯರಾಕ್ಷಸನ ಮತ್ತು ನಂದರ ಚಿತ್ರಪಟಗಳನ್ನು ಹೊರಗೆ ತೆಗೆದು ಅವರ ಗುಣಗಳನ್ನು ಹೊಗಳಿ ಹಾಡಿದೆನು. ಆ ಚಿತ್ರಪಟಗಳು ಆಕೆಯ ದೃಷ್ಟಿಗೆ ಬೀಳಲು ಆಕೆ ವ್ಯಸನದಿಂದ ಕಂಬನಿದುಂಬಿದಳು. ಸೆರಗಿನಿಂದ ಕಣ್ಣೀರನ್ನೊರೆಸಿಕೊಳ್ಳುತ್ತ ಮಗುವನ್ನು ಸೆಳೆದುಕೊಂಡು ಒಳಗೆ ಹೋದಳು. ಆಕೆ ಪೂರ್ಣಗರ್ಭಿಣಿಯಾಗಿರುವುದರಿಂದ ನಿಧಾನವಾಗಿ ತೆರಳುವಾಗ ಆಕೆಯ ಬೆರಳಲ್ಲಿ ಪುರುಷರು ಧರಿಸತಕ್ಕ ಹಾಗೂ ಹೆಸರು ಕೆತ್ತಿದ್ದ ಅಷ್ಟಕೋನದ ಒಂದು ಉಂಗುರವನ್ನು ಕಂಡೆನು. ಅವರು ರಾಕ್ಷಸನ ಪತ್ನೀಪುತ್ರರೆಂಬುದರಲ್ಲಿ ಸಂಶಯವಿಲ್ಲ. ಅವರು ಅಲ್ಲಿ ಪ್ರಚ್ಛನ್ನರಾಗಿದ್ದಾರೆ."

ಮರಾಳನ ಮಾತನ್ನು ಕೇಳಿ ಚಾಣಕ್ಯನು-ಈ ದೂತನು ಹೇಳಿದುದನ್ನು ಕೇಳಿದರೆ ರಾಕ್ಷಸನ ಕುಟುಂಬವು ಚಂದನದಾಸನ ಮನೆಯಲ್ಲಿಯೇ ಇರುವಂತೆ ಭಾಸವಾಗುತ್ತಿದೆ. ಆಕೆಯ ಕೈಯಲ್ಲಿದ್ದ ಉಂಗುರವು ರಾಕ್ಷಸನದಾಗಿರಬೇಕು. ಅದು ನಮ್ಮ ವಶವಾದರೆ ಬಹುಕಾರ್ಯಕ್ಕೆ ಉಪಯುಕ್ತವಾಗುವುದು--ಎಂದು ಬಗೆದು ರಾಕ್ಷಸನ ಮುದ್ರೆಯುಳ್ಳ ಕಾಗದವೊಂದನ್ನು ತರಿಸಿ ಅದನ್ನು ಸಿದ್ಧಾರ್ಥಕನಿಗೆ ಕೊಟ್ಟು ಆ ಕಾಗದದಲ್ಲಿ ಒತ್ತಿರುವ ಮುದ್ರೆಯಂತೆಯೇ

ಇರುವಂತೆ ಸುವರ್ಣದ ಮುದ್ರೆಯುಂಗುರವನ್ನು ಮಾಡಿಸಿ ತರುವಂತೆ ಹೇಳಿದನು. ಸಿದ್ಧಾರ್ಥಕನು ಅದೇ ರೀತಿಯಲ್ಲಿ ತಯಾರಿಸಿಕೊಂಡನು ಬಂದನು. ಚಾಣಕ್ಯನು ಅವನಿಗೆ ಮುಂದೇನು ಮಾಡಬೇಕೆಂಬುದನ್ನು ತಿಳಿಸಿದನು.

ಚಾಣಕ್ಯನು ಸೂಚಿಸಿದಂತೆ ಸಿದ್ಧಾರ್ಥಕನು ಆ ಉಂಗುರವನ್ನು ಒಬ್ಬ ಸೂಲಗಿತ್ತಿಯ ಕೈಗಿತ್ತು, ಅವಳಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಅವಳೇನು ಮಾಡಬೇಕೆಂಬುದನ್ನು ತಿಳಿಸಿ ಕಳುಹಿಸಿದನು. ಅವಳು ಉಪಾಯಾಂತರದಿಂದ ಚಂದನದಾಸನ ಮನೆಯನ್ನು ಸೇರಿದಳು. ರಾಕ್ಷಸನ ಹೆಂಡತಿಯ ಪ್ರಸವಕಾಲವಾದ್ದರಿಂದ ಚಂದನದಾಸನು ಅವಳನ್ನು ಮನೆಯಲ್ಲಿಯೇ ಇಟ್ಟುಕೊಂಡನು. ಅಮಾತ್ಯನ ಹೆಂಡತಿಯು ಪ್ರಸವಕಾಲದಲ್ಲಿ ತೆಗೆದಿಟ್ಟಿದ್ದ ಉಂಗುರವನ್ನು ತಾನು ತೆಗೆದುಕೊಂಡು, ತಾನು ತಂದಿದ್ದ ಉಂಗುರವನ್ನು ಅದರ ಜಾಗದಲ್ಲಿರಿಸಿ ವಿಷಯವು ಯಾರಿಗೂ ಗೊತ್ತಾಗದಂತೆ ಆ ಉಂಗುರವನ್ನು ಸಿದ್ಧಾರ್ಥಕನಿಗೆ ತಂದುಕೊಟ್ಟಳು. ಸಿದ್ಧಾರ್ಥಕನು ಅದನ್ನು ಚಾಣಕ್ಯನಿಗೆ ಒಪ್ಪಿಸಿದನು. ಆ ಉಂಗುರವು ರಾಕ್ಷಸನದೆಂದು ನಿರ್ಧರಿಸಿ ಚಾಣಕ್ಯನು--ಈ ಮುದ್ರಿಕೆಯ ಸಹಾಯದಿಂದ ರಾಕ್ಷಸನಿಗೆ ಮಲಯಕೇತುವಿನಿಂದ ತಿರಸ್ಕಾರವುಂಟಾಗಿ ಅವನು ತಾನಾಗಿ ಇಲ್ಲಿಗೆ ಬರುವಂತೆ ಮಾಡುವೆನು--ಎಂದು ನಿಶ್ಚಯಿಸಿದನು.

ಚಾಣಕ್ಯನು ಏನೋ ಯೋಚಿಸಿ ಯಾರಿಂದ, ಯಾರಿಗೆ ಎಂಬ ಹೆಸರೊಂದನ್ನೂ ಸೂಚಿಸದೆ ಪ್ರಕೃತೋಚಿತವಾದ ಸಂಗತಿಗಳನ್ನು ಬರೆದು ಸಿದ್ಧಾರ್ಥಕನಿಗೆ ಕೊಟ್ಟು ಅವನಿಗೆ ಪರಿಚಿತನಾದ ಶಕಟದಾಸನಿಂದ ಸ್ಫುಟವಾಗಿ ಅದರ ಪ್ರತಿಯೊಂದನ್ನು ಬರೆಸಿಕೊಂಡು ಬರುವಂತೆ ಉಪಾಯವನ್ನು ಹೇಳಿ ಕಳುಹಿಸಿದನು. ಅವನು ಶಕಟದಾಸನನ್ನು ಕಂಡು ಪರಸ್ಪರ ಸಂಭಾಷಣೆ ನಡೆಸಿ ಮುಗಿಸಿದ ಮೇಲೆ ತಾನು ತಂದಿದ್ದ ಪತ್ರವನ್ನು ಅವನಿಗೆ ಕೊಟ್ಟು, 'ಈ ಪತ್ರದಲ್ಲಿ ಒಂದು ಕೌತುಕವುಂಟು. ಇದರಲ್ಲಿ ಸೇರಿರುವ ಅಕ್ಷರಗಳನ್ನು ವ್ಯತ್ಯಸ್ತವಾಗಿ ಬರೆದರೆ ಉತ್ತಮ ಶ್ಲೋಕಗಳಾಗುವುವಂತೆ. ಇದರಲ್ಲಿರುವ ಲಿಪಿಗಳು ಅಸ್ಫುಟವಾಗಿರುವುದರಿಂದ ಸ್ಫುಟವಾಗಿ ಇದರ ಪ್ರತಿಯೊಂದನ್ನು ಮಾಡಿಕೊಡು' ಎಂದು ಕೇಳಿದನು. ಏನೂ ಅರಿಯದ ಶಕಟದಾಸನು ತನ್ನ

ಕೈಬರಹದಿಂದ ಸ್ಫುಟವಾಗಿ ಬರೆದುಕೊಟ್ಟು ಏನು ವಿಶೇಷ ತೋರುವುದೆಂದು ಕೇಳಿದನು. ಸಿದ್ಧಾರ್ಥಕನು ಅದನ್ನು ತೆಗೆದುಕೊಂಡು ನೋಡಿ ಏನೂ ಗೊತ್ತಾಗ ದವನಂತೆ 'ಇದನ್ನು ಬರೆದ ಕವೀಶ್ವರನ ಮತ ನನಗೆ ಅರ್ಥವಾಗಲಿಲ್ಲ. ಅವ ನನ್ನೇ ಕೇಳಿ ತಿಳಿಯುತ್ತೇನೆ.' ಎಂದು ಹೇಳಿ ಅಲ್ಲಿಂದ ಹೊರಟುಬಂದು ಆ ಪತ್ರವನ್ನು ಚಾಣಕ್ಯನಿಗೆ ಕೊಟ್ಟನು.

ಶಕಟದಾಸನು ಬರೆದುಕೊಟ್ಟ ಪತ್ರವನ್ನು ಮಡಿಸಿ ಚಾಣಕ್ಯನು ರಾಕ್ಷ ಸನ ಮುದ್ರೆಯುಂಗುರದಿಂದ ಅದಕ್ಕೆ ಮೊಹರು ಮಾಡಿಸಿದನು. ಅದನ್ನು ಸಿದ್ಧಾರ್ಥಕನಿಗೆ ಕೊಟ್ಟು 'ಆಪ್ತನೆ, ಇದುವವರೆಗೆ ಚಂದ್ರಗುಪ್ತನ ಕಾರ್ಯಕ್ಕೆ ನಿನ್ನಿಂದ ಬಹಳ ಸಹಾಯವಾಯಿತು. ಕಾರ್ಯಸಾಧಿಸುವುದರಲ್ಲಿ ನೀನು ಬಹು ಸಮರ್ಥನು. ಈಗ ನೀನು ಮತ್ತೊಂದು ಮುಖ್ಯವಾದ ಕಾರ್ಯಭಾರವನ್ನು ನಿರ್ವಹಿಸಬೇಕಾಗಿದೆ.' ಎಂದು ಅವನಿಗೆ ರಹಸ್ಯವಾಗಿ ಹೇಳಬೇಕಾದುದನ್ನೆಲ್ಲಾ ಹೇಳಿ ಆ ಕಾಗದವನ್ನೂ ರಾಕ್ಷಸನ ಮುದ್ರೆಯುಂಗುರವನ್ನೂ ಅವನಿಗೆ ಕೊಟ್ಟು ಕಳುಹಿಸಿದನು.

ಅನಂತರ ಚಾಣಕ್ಯನು ತನಗೆ ಆಪ್ತರಾದ ಮೂವರು ಬ್ರಾಹ್ಮಣರನ್ನು ಕರೆಸಿ ಪರ್ವತರಾಜನ ಆಭರಣಗಳನ್ನು ಎಲ್ಲರಿಗೂ ಗೊತ್ತಾಗುವ ಹಾಗೆ ದಾನ ವಾಗಿ ಕೊಡಿಸಿದನು. ಅವರನ್ನು ರಹಸ್ಯವಾಗಿ ಕರೆದು 'ಒಂದು ಕಾರ್ಯಾರ್ಥವಾಗಿ ನಿಮಗೆ ಈ ಆಭರಣಗಳನ್ನು ಕೊಡಿಸಿರುವೆನು. ನೀವು ವರ್ತಕರ ವೇಷದಿಂದ ಹೋಗಿ ಮಲಯಕೇತುವನ್ನು ಆಶ್ರಯಿಸಿರುವ ಅಮಾತ್ಯರಾಕ್ಷಸನಿಗೆ ಇವು ಗಳನ್ನು ವಿಕ್ರಯ ಮಾಡಿ ಅದರಿಂದ ಬರುವ ಹಣವನ್ನು ನೀವೇ ತೆಗೆದುಕೊಳ್ಳಿ' ಎಂದು ಹೇಳಿಕಳುಹಿಸಿದನು.

## ಮಿತ್ರಪ್ರೇಮ

ಬಳಿಕ ಚಾಣಕ್ಯನು ಶಿಷ್ಯನೊಬ್ಬನನ್ನು ಕರೆದು 'ಜೀವಸಿದ್ಧಿಯೆಂಬ ಕ್ಷಪಣಕನು ರಾಕ್ಷಸನಿಂದ ಪ್ರೇರಿತನಾಗಿ ವಿಷಕನ್ಯೆಯ ಮೂಲಕ ಪರ್ವತರಾಜನ ಮರಣಕ್ಕೆ ಕಾರಣನಾದುದರಿಂದ ಅವನು ದ್ರೋಹಿಯಾದನು. ಅದಕ್ಕಾಗಿ ರಾಜಾಜ್ಞೆಯಂತೆ ಅವನನ್ನು ಪಟ್ಟಣದಿಂದ ಹೊರಡಿಸಲಾಗುವುದೆಂದು ಸಾರುತ್ತ ಅವನನ್ನು ಪುರದಿಂದ ಹೊರಗೆ ಕಳುಹಿಸುವಂತೆ ನಾವು ಆಜ್ಞೆಮಾಡಿರುವೆವೆಂದು

ತಳವಾರನಾದ ದಂಡಕನಿಗೆ ಹೇಳಿ ಬಾ.' ಎಂದು ಕಳುಹಿಸಲು ಅವನು ಹೋಗಿ ತಿಳಿಸಿ ಬಂದು 'ತಮ್ಮ ಅಪ್ಪಣೆ ಪ್ರಕಾರ ಕ್ಷಪಣಕನನ್ನು ಪುರದಿಂದ ಹೊರಡಿಸಿದರು.' ಎಂದು ತಿಳಿಸಿದನು.

ಪಶುಲೋಮನೆಂಬ ಮತ್ತೊಬ್ಬ ಶಿಷ್ಯನಿಗೆ 'ಅಮಾತ್ಯನ ರಾಯಸದವನಾದ ಶಕಟದಾಸನು ಇಲ್ಲಿದ್ದುಕೊಂಡು ದಾರುವರ್ಮಾದಿಗಳಿಗೆ ಸಹಾಯಮಾಡಿ ಚಂದ್ರಗುಪ್ತನಿಗೆ ದ್ರೋಹವನ್ನೆಸಗಿದುದರಿಂದ ಪ್ರಭುಗಳ ಅಪ್ಪಣೆಯಂತೆ ಅವನನ್ನು ಶೂಲಕ್ಕೇರಿಸುವುದೆಂದು ನಾವು ಹೇಳಿದುದಾಗಿ ದಂಡಪಾಶಕನಿಗೆ ತಿಳಿಸಿ ಬಾ.' ಎಂದು ಹೇಳಿ ಅವನ ಕಿವಿಯಲ್ಲಿ ಮತ್ತೇನನ್ನೋ ಉಸಿರಲು ಅವನು ಅದೇ ಪ್ರಕಾರ ಹೋಗಿ ತಿಳಿಸಿ ಬಂದು, ಶಕಟದಾಸನನ್ನು ಹಿಡಿದು ತರುವುದಕ್ಕೆ ದಂಡಪಾಶಕನು ಹೋದನೆಂದು ತಿಳಿಸಿದನು.

ಶೀಘ್ರಕಾರಿಯೆಂಬ ಮತ್ತೊಬ್ಬ ಶಿಷ್ಯನಿಗೆ ಬಳೆಗಾರಶೆಟ್ಟಿಯಾದ ಚಂದನದಾಸನನ್ನು ಕರೆ ತರುವಂತೆಆಜ್ಞಾಪಿಸಿದನು. ಅವನುಹೋಗಿ ಚಾಣಕ್ಯನ ಅಪ್ಪಣೆಯನ್ನು ಚಂದನದಾಸನಿಗೆ ತಿಳಿಸಿದನು. ಆ ಶೆಟ್ಟಿಯು ತನ್ನ ಮನಸ್ಸಿನಲ್ಲಿ 'ಕಠಿಣಚಿತ್ತವುಳ್ಳವನಾದ ಚಾಣಕ್ಯನನ್ನು ಕಂಡರೆ ನಿರಪರಾಧಿಯಾದರೂ ಭೀತನಾಗುವನು. ನಾನಾದರೋ ಮಹಾಪರಾಧಿಯು. ಅವನನ್ನು ಕಂಡ ಬಳಿಕ ನನಗೇನು ವಿಪತ್ತು ಬರುವುದೋ! ಒಳ್ಳೆಯದು, ಮಿತ್ರಕಾರ್ಯಾರ್ಥವಾಗಿ ಬಂದರೂ ಬರಲಿ. ರಾಕ್ಷಸನ ಗೃಹಜನ ಮಾತ್ರ ಸಿಕ್ಕದಂತೆ ಮಾಡಿದರೆ ಅದೇ ನನಗೆ ಪರಮ ಲಾಭ' ಎಂದು ನಿಶ್ಚಯಿಸಿದನು.

ಚಾಣಕ್ಯ ಶಿಷ್ಯನನ್ನು ಕುರಿತು 'ವಿಪ್ರೋತ್ತಮನೆ, ನಾನು ಧರಿಸಿರುವ ವಸ್ತ್ರಗಳು ಮಲಿನವಾಗಿವೆ. ದೊಡ್ಡವರನ್ನು ಕಾಣುವುದಕ್ಕೆ ಬೇರೆ ಧೌತಾಂಬರಗಳನ್ನುಟ್ಟುಕೊಂಡು ಬರುವೆನು. ನೀನು ಅದುವರೆಗೂ ಈ ಪೀಠದ ಮೇಲೆ ಕುಳಿತಿರಬಹುದು.' ಎಂದು ಹೇಳಿ ಒಳಗೆ ಹೋದನು. ತನಗೆ ಆಪ್ತನಾದ ಧನಸೇನನನ್ನು ಕರೆದು 'ಕ್ರೂರನಾದ ಚಾಣಕ್ಯನು ನನ್ನನ್ನು ಕರೆಯಕಳುಹಿಸಿದ್ದಾನೆ. ಆತನ ಬಳಿಗೆ ಹೋದ ಬಳಿಕ ಏನಾಗುವುದೋ ಹೇಳಲಾಗುವುದಿಲ್ಲ. ನೀನು ಅಮಾತ್ಯರ ಕುಟುಂಬದವರನ್ನು ಮತ್ತೊಂದು ರಹಸ್ಯಸ್ಥಾನದಲ್ಲಿ ಇರಿಸಿ ಕಾದುಕೊಂಡಿರು' ಎಂದು ಹೇಳಿ ತಾನು ಮಡಿವಸ್ತ್ರಗಳನ್ನು ಧರಿಸಿ ಹೊರಟು ಬಂದು ಚಾಣಕ್ಯನನ್ನು ಕಂಡು ಕೈಮುಗಿದನು.

“ಚಂದನದಾಸನೆ, ನೀನು ಕ್ಷೇಮದಿಂದಿರುವೆಯಾ? ಮಾಡುವ ವ್ಯಾಪಾರಗಳು ನಿರುಪಾಧಿಕಗಳಾಗಿ ನಡೆಯುತ್ತಲಿವೆಯೆ?” ಎಂದು ಚಾಣಕ್ಯನು ಕೇಳಿದನು. ಆ ಮಾತಿಗೆ ಚಂದನದಾಸನು “ಸ್ವಾಮಿ, ತಮ್ಮ ಕೃಪೆಯಿಂದ ಎಲ್ಲವೂ ಅನುಕೂಲವಾಗಿವೆ.” ಎಂದು ಹೇಳಿ ನಮಸ್ಕರಿಸಿ ಕುಳಿತುಕೊಂಡನು. ಬಳಿಕ ಚಾಣಕ್ಯನು ಚಂದನದಾಸನೊಡನೆ ಸಂಭಾಷಣೆಯಲ್ಲಿ ತೊಡಗಿದನು.

“ಚಂದನದಾಸನೆ, ಪ್ರಜೆಗಳು ಚಂದ್ರಗುಪ್ತನನ್ನು ಒಳ್ಳೆಯವನೆಂದು ಹೇಳುತ್ತಾರೋ, ನಂದರನ್ನೇ ಉತ್ತಮರೆಂದು ಹೊಗಳಿಕೊಳ್ಳುತ್ತಾರೋ?”

“ಸ್ವಾಮಿ, ಶರತ್ಕಾಲದ ಚಂದ್ರನನ್ನು ಕಂಡ ನೈದಿಲೆಗಳಂತೆ ಪ್ರಜೆಗಳು ಚಂದ್ರಗುಪ್ತ ಮಹಾರಾಜರನ್ನೇ ಅಪೇಕ್ಷಿಸುತ್ತಿದ್ದಾರೆ.”

“ಸಂತುಷ್ಟರಾದ ಪ್ರಜೆಗಳ ದೆಸೆಯಿಂದ ಅರಸುಗಳು ಪ್ರತ್ಯುಪಕಾರವನ್ನಪೇಕ್ಷಿಸುವುದು ಪೂರ್ವಮರ್ಯಾದೆ.”

“ಸ್ವಾಮಿಯವರ ಅಪ್ಪಣೆಯಾದಂತೆ ಸರ್ವರೂ ತಮ್ಮ ಶಕ್ತಿಯನ್ನು ಮೀರಿ ನಡೆದುಕೊಳ್ಳುವುದರಲ್ಲಿ ಸಂಶಯವಿಲ್ಲ.”

“ಚಂದನದಾಸನೆ, ನಿರಪರಾಧಿಗಳಾದ ಪ್ರಜೆಗಳದೆಸೆಯಿಂದ ದ್ರವ್ಯವನ್ನು ತೆಗೆಯುವುದಕ್ಕೆ ಇದು ನಂದರ ಪ್ರಭುತ್ವವಲ್ಲ. ನೀವೆಲ್ಲರೂ ಕ್ಷೇಮಿಗಳಾಗಿದ್ದರೆ ಅದೇ ಚಂದ್ರಗುಪ್ತನಿಗೆ ಮಹಾಭ್ಯುದಯವು.”

“ಸ್ವಾಮಿ, ಅದೇ ಮೇರೆಗೆ ನಮ್ಮೆಲ್ಲರನ್ನೂ ರಕ್ಷಿಸಬೇಕು.

“ದೊರೆಗಳಿಗೆ ಅಪ್ರಿಯವನ್ನು ಮಾಡದಿದ್ದರೆ ನೀವೆಲ್ಲರೂ ಸಂರಕ್ಷಿತರಾಗಿರುವಿರಿ.”

“ಸ್ವಾಮಿ, ದುರಾತ್ಮಕನಾದವನು ಜನೇಶ್ವರರಿಗೆ ಅಪ್ರಿಯವನ್ನು ಎಣಿಸುವನು.”

“ಚಂದನದಾಸನೆ, ಮೊದಲು ನೀನೇ ರಾಜದ್ರೋಹಿಯಾಗಿದ್ದೀ.”

ಅದನ್ನು ಕೇಳಿ ಚಂದನದಾಸನು ಬುದ್ಧೀಶ! ಬುದ್ಧೀಶ? ಎಂದು ದೇವರನ್ನು ನೆನೆಯುತ್ತ, “ಸ್ವಾಮಿ, ಅಗ್ನಿಯೊಡನೆ ತೃಣಕ್ಕೆ ಕಲಹವುಂಟೆ?”

“ವರ್ತಕನೆ, ರಾಜಾಪರಾಧಿಯಾದ ರಾಕ್ಷಸನ ಗೃಹಜನವನ್ನು ನಿನ್ನ ಮನೆಯಲ್ಲಿ ಮರೆಮಾಡಿ ಇರಿಸಿಕೊಂಡು ಈಗಿನವರೆಗೂ ಪ್ರಭುವಿಗೆ ವಿಜ್ಞಾಪಿಸದೆ ಇರುವುದರಿಂದ ನೀನು ಅಪರಾಧಿಯೋ ಅಲ್ಲವೋ?”

" ಸ್ವಾಮಿ, ಯಾರೋ ಅನೃತವನ್ನು ಹೇಳಿರಬೇಕು. ಈ ವಿಚಾರವನ್ನು ನಾನು ಕಂಡವನಲ್ಲ."

" ಈ ಸಂಗತಿಯನ್ನು ನೀನು ಕಂಡಿರುವುದುಂಟಾದರೆ ನಿನ್ನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು ನಿನಗೆ ತೀಕ್ಷ್ಣವಾದ ದಂಡನೆಯನ್ನು ಮಾಡಬಹುದೆ ? "

" ಅಮಾತ್ಯನು ಹೋಗುವ ಸಮಯದಲ್ಲಿ ತನ್ನ ಮನೆಯ ಜನರನ್ನು ನನ್ನ ಮನೆಯಲ್ಲಿರಿಸಿದ್ದುದುಂಟು. ಆ ಬಳಿಕ ಅವರು ನನ್ನನ್ನು ವಂಚಿಸಿ ಎಲ್ಲಿಯೋ ಹೋದುದರಿಂದ ವಿಜ್ಞಾಪಿಸುವುದಕ್ಕೆ ಭಯಪಡುತ್ತಿದ್ದೆನು."

" ಮೊದಲು ಕಾಣೆನೆಂದು ಹೇಳಿ ಈಗ ಕಂಡುದುಂಟು. ಎಲ್ಲಿಯೋ ಹೋದರು ಎಂಬ ಎರಡು ಮಾತುಗಳನ್ನು ಹೇಳಬಹುದೇ ?"

" ಭಯದಿಂದ ಬಾಯಿತಪ್ಪಿ ಹಾಗೆ ಹೇಳಿದೆನು."

ಚಾಣಕ್ಯನು ನಕ್ಕು " ವ್ಯಾಪಾರಿಯೆ, ಚಂದ್ರಗುಪ್ತನ ಪ್ರಭುತ್ವದಲ್ಲಿ ಬಾಯಿತಪ್ಪೂ ಬರಕೂಡದು. ಸುಮ್ಮನೆ ರಾಕ್ಷಸನ ಸತೀಸುತರನ್ನು ತಂದು ಒಪ್ಪಿಸು."

ಆ ಮಾತಿಗೆ ಚಂದನದಾಸನು ತನ್ನ ಮನಸ್ಸಿನಲ್ಲಿ ಈಗ ಶಿರಸ್ಸಿನ ಮೇಲೆ ಸರ್ಪಬಾಧೆಯೂ ಪರ್ವತ ಪ್ರಾಂತ್ಯದಲ್ಲಿ ವಿಷಹರವಾದ ಔಷಧವೂ ಇದ್ದಂತಾಯಿತು ! ಏನೋ ಮಹದಾಪತ್ತು ಬಂದಂತಿದೆ. ಎಂದು ಚಿಂತಿಸುತ್ತಿರುವಷ್ಟರಲ್ಲಿ ಹೊರಗೆ ಆಗುವ ಕಲಕಲವನ್ನು ಕೇಳಿ ಚಾಣಕ್ಯನು ಅದೇನು ತಿಳಿದು ಬಾರೆಂದು ಶಿಷ್ಯನಿಗೆ ನೇಮಿಸಿದನು.

ಶಿಷ್ಯನು ಹೋಗಿಬಂದು " ಉಪಾಧ್ಯಾಯರೆ, ವಿಷಕನ್ಯಾ ಮುಖದಿಂದ ಪರ್ವತರಾಜರನ್ನು ಸಂಹರಿಸಿದ ದೋಷವನ್ನುದ್ಘಾಟಿಸುತ್ತ ದೂತರು ಜೀವಸಿದ್ಧಿಯೆಂಬ ಕ್ಷಪಣಕನನ್ನು ಚಂದ್ರಗುಪ್ತನಅಪ್ಪಣೆಯಪ್ರಕಾರ ಅವಮಾನಪೂರ್ವಕವಾಗಿ ಪಟ್ಟಣದಿಂದ ಹೊರಡಿಸುತ್ತಿದ್ದಾರೆ " ಎನ್ನಲು, 'ಅವನು ಮಾಡಿದ್ದಕ್ಕೆ ತಕ್ಕ ಫಲವನ್ನನುಭವಿಸಲಿ ' ಎಂದು ಚಾಣಕ್ಯನು ಹೇಳುತ್ತ, ' ಚಂದನದಾಸನೆ, ರಾಜಾಪರಾಧಿಗಳಿಗೆ ಈ ರೀತಿಯಾಗುವುದು ಸ್ವಭಾವ. ಆದುದರಿಂದ ವಂಚಿಸದೆ ರಾಕ್ಷಸನ ಪುತ್ರಕಳತ್ರರನ್ನು ಕರೆತಂದು ಒಪ್ಪಿಸುವವನಾಗು.'

" ಸ್ವಾಮಿ, ನಾನು ಅರಿತವನಲ್ಲ."

ಅಷ್ಟರಲ್ಲಿಯೇ ಪುನಃ ಬೀದಿಯಲ್ಲಿ ಕೋಲಾಹಲರವವು ಕೇಳಿಬರುತ್ತಿರಲು ಅದೇನು ನೋಡೆಂದು ಚಾಣಕ್ಯನು ಶಿಷ್ಯನಿಗೆ ಆಜ್ಞಾಪಿಸಿದನು. ಅವನು ಹೋಗಿ ನೋಡಿಬಂದು " ಉಪಾಧ್ಯಾಯರೆ, ಭಟರು ರಾಜದ್ರೋಹಿಯಾದ ಶಕಟದಾಸನನ್ನು ಅರಸರ ಅಪ್ಪಣೆಯ ಮೇಲೆಗೆ ಶೂಲಕ್ಕೆ ಹಾಕುವುದಕ್ಕೆ ಸಾರಿಕೊಂಡು ಕರೆದೊಯ್ಯುತ್ತಿದ್ದಾರೆ. " ಎನ್ನಲು ' ಅವನು ಮಾಡಿದ ದ್ರೋಹಕ್ಕೆ ಅನುಗುಣವಾದ ಫಲವನ್ನನುಭವಿಸಲಿ' ಎಂದು ಹೇಳುತ್ತ ಚಾಣಕ್ಯನು ಚಂದನದಾಸನಿಗೆ ಮತ್ತೆ ಹೇಳಿದನು.

" ಶೆಟ್ಟಿಯೆ, ರಾಜಾಪರಾಧಿಗಳಿಗೆ ಹೀಗೆ ಕಠಿಣದಂಡನೆಯಾಗುತ್ತಿರುವುದನ್ನು ಕಂಡೂ ಇನ್ನೂ ಅರಿಯೆನೆಂದು ಹೇಳುತ್ತೀಯೆ ? ನಿನ್ನ ಹೆಂಗಸರು ಮಕ್ಕಳಿಗೆ ಕ್ಷೇಮವಾಗಬೇಕಾದರೆ ರಾಕ್ಷಸನ ಮನೆಯವರನ್ನು ತಂದು ಒಪ್ಪಿಸು."

" ಸ್ವಾಮಿ, ಸುಮ್ಮನೆ ನನ್ನನ್ನು ಬೆದರಿಸಬೇಡಿ. ಅಮಾತ್ಯನ ಕುಟುಂಬದವರನ್ನು ಇದ್ದರೂ ನಾನೂ ಕೊಡುವವನಲ್ಲ. ಇಲ್ಲದಿರುವವರನ್ನು ಹೇಗೆ ಒಪ್ಪಿಸಲಿ ? "

" ನಿನ್ನ ನಿಶ್ಚಯವು ಇದೇ ಸರಿಯೋ ? "

" ಸ್ವಾಮಿ, ಹೀಗೆಯೇ ಸರಿ. "

" ಚಾಣಕ್ಯನು ತನ್ನ ಹೃದಯದಲ್ಲಿ ಈ ಶೆಟ್ಟಿಯು ಸತ್ಯವಂತನು. ಮಿತ್ರಕಾರ್ಯಕ್ಕೋಸ್ಕರ ತನ್ನ ಪ್ರಾಣವನ್ನಾದರೂ ಒಪ್ಪಿಸತಕ್ಕವನು. ' ಎಂದು ನಿಶ್ಚಯಿಸಿ, ಬಳಿಕ ಕೋಪಿಸಿಕೊಂಡವನಂತೆ ಹುಬ್ಬುಗಂಟಿಕ್ಕಿ " ದುರಾತ್ಮನಾದ ವರ್ತಕನೆ, ಹಾಗಾದರೆ ನೀನು ಮಾಡಿದ ದ್ರೋಹಕ್ಕೆ ಸರಿಯಾದ ಫಲವನ್ನನುಭವಿಸಬೇಕಾಗುವುದು. "

" ಸ್ವಾಮಿ, ನೀವು ಏನುಬೇಕಾದರೂ ಮಾಡಿ. "

ಆಗ ಚಾಣಕ್ಯನು ಶಿಷ್ಯನನ್ನು ಕರೆದು ' ಶೀಘ್ರಕಾರಿಯೆ, ಈ ದುಷ್ಟ ವಣಿಜನ ಮನೆಯ ಪದಾರ್ಥವೆಲ್ಲವನ್ನೂ ರಾಜಕೋಶಕ್ಕೆ ತೆಗೆದುಕೊಂಡು ಸ್ವಜನ ಸಮೇತನಾಗಿ ಇವನನ್ನು ಕಾವಲಿನಲ್ಲಿ ಇರಿಸುವಂತೆ ದುರ್ಗಪಾಲನಿಗೆ ಹೇಳು. ನಾನು ಚಂದ್ರಗುಪ್ತನಿಗೆ ತಿಳಿಸಿ ಇವನಿಗೆ ಕಠಿಣದಂಡನೆಯನ್ನು ಮಾಡಿಸುವೆನು. ' ಎಂದು ಹೇಳಿ ಚಂದನದಾಸನನ್ನು ಕಳುಹಿಸಿದನು.

ತನ್ನ ಅಂತರಂಗದಲ್ಲಿ ' ಈ ಚಂದನದಾಸನು ಸಹೃದಯನಾದ ರಾಕ್ಷಸನ

ನಿಮಿತ್ತನಾಗಿ ತನ್ನ ತನುವನ್ನಾದರೂ ಕೊಟ್ಟು ಆತನ ಪತ್ನೀಪುತ್ರರನ್ನು ರಕ್ಷಿಸುವೆನೆಂದು ಹೇಗೆ ನಿಶ್ಚಯಿಸಿರುವನೋ ಹಾಗೆಯೇ ರಾಕ್ಷಸನೂ ತನ್ನ ನಿಮಿತ್ತವಾಗಿ ಚಂದನದಾಸನಿಗೆ ಬಂದ ವಿಪತ್ತನ್ನು ಪರಿಹರಿಸಲೋಸುಗ, ಸ್ವಂತ ಪ್ರಾಣವನ್ನಾದರೂ ಇತ್ತು ಚಂದನದಾಸನನ್ನು ಬಿಡಿಸುವೆನೆಂದು ಎಳಗಂದಿಯು ಕರುವಿದ್ದೆಡೆಗೆ ಓಡಿಬರುವಂತೆ ತಾನೂ ಇಲ್ಲಿಗೆ ಬಂದೇಬರುವನು. ಶಕಟದಾಸನನ್ನು ಶೂಲಸ್ಥಾನಕ್ಕೆ ಕಳುಹಿಸಿದಂತೆ ಸಮಯವನ್ನರಿತು ಈ ಶೆಟ್ಟಿಯನ್ನು ಅದೇ ಸ್ಥಾನಕ್ಕೆ ಕಳುಹಿಸಬೇಕೆಂದು ನಿಶ್ಚಯಿಸಿದನು.

ಶಕಟದಾಸನನ್ನು ಶೂಲಾರೋಹಣೆಗೆಂದು ಕರೆದೊಯ್ಯುತ್ತಿದ್ದರು. ಚಾಣಕ್ಯನ ಸೂಚನೆಯಂತೆ ಸಿದ್ಧಾರ್ಥಕನು ಮುಂಚಿತವಾಗಿಯೇ ಖಡ್ಗಪಾಣಿ ಯಾಗಿ ಬಂದು ಶೂಲದ ಬಳಿ ಮರೆಯಾಗಿ ನಿಂತಿದ್ದನು. ಕಟುಕರು ಶಕಟ ದಾಸನನ್ನು ಶೂಲದ ಬಳಿಗೆ ಕರೆತಂದೊಡನೆ ಕತ್ತಿಯನ್ನು ಝಳಪಿಸುತ್ತಾ ಆ ಘಾತುಕರ ಮೇಲೆ ಬಿದ್ದು ಕಣ್ಣುಸನ್ನೆ ಮಾಡಲು ಆ ಕಟುಕರು ಅವನ ರಭಸಕ್ಕೆ ಭೀತರಾದವರಂತೆ ಶಕಟದಾಸನನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿ ಹೋದರು.

ಸಿದ್ಧಾರ್ಥಕನು ಚಂದ್ರಗುಪ್ತಚಾಣಕ್ಯರನ್ನು ನಿಂದಿಸುತ್ತ 'ಶಕಟದಾಸನೆ, ಇನ್ನು ನೀನು ಭಯವನ್ನು ಬಿಡು. ಘಾತುಕರು ಹೆದರಿ ಓಡಿಹೋದರು. ಇನ್ನು ನಾವು ಈ ಸ್ಥಳದಲ್ಲಿದ್ದರೆ ಅಪಾಯ ಸಂಭವಿಸುವುದು. ಇಲ್ಲಿ ನಿಲ್ಲದೆ ಬೇರೆಲ್ಲಿಗಾದರೂ ಹೋಗೋಣ ನಡೆ.' ಎಂದು ಅವನಿಗೆ ಒಳ್ಳೆಯದನ್ನು ಬಯಸುವವನಂತೆ ಅವನನ್ನು ಕರೆದುಕೊಂಡು ಪರ್ವತರಾಜ್ಯದ ಕಡೆಗೆ ನಡೆದನು. ಪುರಜನರು ಬಾಗುರಾಯಣನೂ ಭದ್ರಭಟಾದಿ ಸೇನಾಪತಿಗಳೂ ಕ್ಷಪಣಕನೂ ರಾಜದ್ರೋಹದ ಅಪಾದನೆಗೊಳಗಾಗಿ ಚಾಣಕ್ಯನ ಆಜ್ಞೆಯಂತೆ ಪಟ್ಟಣದಿಂದ ಹೊರಡಿಸಲ್ಪಟ್ಟರು. ಮರಣದಂಡನೆಗೆ ಗುರಿಯಾದ ಶಕಟದಾಸ ನನ್ನು ಹೇಗೋ ಬಿಡಿಸಿಕೊಂಡು ಸಿದ್ಧಾರ್ಥಕನು ಎಲ್ಲಿಗೋ ಓಡಿಹೋದನು. ಚಾಣಕ್ಯನ ಕೋಪಾಗ್ನಿಯು ಮತ್ತಾರನ್ನು ದಹಸಲಿರುವುದೋ, ಎಂದು ಮಾತನಾಡಿಕೊಳ್ಳುತ್ತಿದ್ದರು. ತನ್ನ ಉದ್ದೇಶದಂತೆ ಎಲ್ಲವೂ ನಡೆಯುತ್ತಿದೆ ಯೆಂದು ಚಾಣಕ್ಯನು ಹರ್ಷದಿಂದಿದ್ದನು.

## ಅಭ್ಯಾಸ

ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಷಯದ ಹೆಗ್ಗುರುತು ಗಳನ್ನು ಉಪಯೋಗಿಸಿಕೊಂಡು ಉತ್ತಮ ಪ್ರಬಂಧವನ್ನು ಬರೆಯಿರಿ.

೧. **ವಿಪತ್ಪರಿಹಾರ ಅಥವಾ ಶೋಧನಶಕ್ತಿ**

1. ವಿಷಕನ್ಯಾ ಪ್ರಸಂಗ.
2. ದಾರುವರ್ಮನ ಕೃತಕಶಿಲ್ಪ.
3. ರಾಜವೈದ್ಯನ ಚೂರ್ಣಪ್ರಯೋಗ.
4. ಶಯ್ಯಾಗೃಹ ಶೋಧನೆ.

೨. **ಮುದ್ರಿಕಾ ಸಂಗ್ರಹಣ**

1. ನಿಯುಕ್ತ ಗೂಢಚಾರರು.
2. ಮರಾಳನ ಚಾತುರ್ಯ.
3. ಮುದ್ರಿಕಾ ಸಂಗ್ರಹಣೋಪಾಯ.
4. ಶಕಟದಾಸನಿಂದ ಪತ್ರರಚನೆ.

ಚಂದನದಾಸನಿಗೂ ಚಾಣಕ್ಯನಿಗೂ ನಡೆದ ಸಂಭಾಷಣೆಯಿಂದ ವ್ಯಕ್ತ ವಾಗುವ ಚಂದನದಾಸನ ಮಿತ್ರಪ್ರೇಮದ ವಿಷಯವಾಗಿ ಒಂದು ಲೇಖನ ಬರೆಯಿರಿ.

---

## ಪ್ರಕರಣ ೫

[ಕೌಮುದೀ ಮಹೋತ್ಸವ. ಕಪಟ ಕಲಹ. ಕ್ಷಪಣಕ ದರ್ಶನ. ಮಿತ್ರಭೇದ. ದೋಷಾರೋಪಣೆ.]

ಶರತ್ಕಾಲದ ಶುಕ್ಲಪಕ್ಷ. ಸಕಲಜನಾಹ್ಲಾದಕರವಾದ ಸಮಯ. ಆಕಾಶವು ನಿರ್ಮಲವಾಗಿತ್ತು. ಚಂದ್ರನು ಚಂದ್ರಗುಪ್ತನ ಅಭ್ಯುದಯದಂತೆ ದಿನ ದಿನಕ್ಕೆ ಒಂದೊಂದು ಕಳೆಯಿಂದ ವೃದ್ಧಿಯಾಗುತ್ತ ಶೋಭಿಸುತ್ತಿದ್ದನು. ಬೆಳದಿಂಗಳು ಅತ್ಯಂತ ಆಪ್ಯಾಯಮಾನವಾಗಿತ್ತು. ಆಗ ಚಂದ್ರಗುಪ್ತನು ಆ ಸಂತೋಷದ ದಿನಗಳಿಂದ ಪ್ರೀತನಾಗಿ—ನಾನು ಹುಣ್ಣಿಮೆಯ ಚಂದ್ರೋದಯ ಸಮಯದಲ್ಲಿ ಹುಟ್ಟಿದುದರಿಂದ ನನಗೆ ಚಂದ್ರಗುಪ್ತನೆಂದು ನಾಮಕರಣ ಮಾಡಿದರು. ಈ ಶುದ್ಧ ಹುಣ್ಣಿಮೆಯ ದಿನ ನನ್ನ ಜನ್ಮದಿನೋತ್ಸವವು ನಡೆಯಬೇಕಾಗಿದೆ. ಆದುದರಿಂದ ಈಗ ರಮಣೀಯವಾದ ಕೌಮುದೀಮಹೋತ್ಸವವನ್ನು ಆಚರಿಸಿ, ನಂದರ ಮರಣದಿಂದ ದುಃಖಿತರಾಗಿರುವ ಪ್ರಜೆಗಳಿಗೆ ಸಂತೋಷವನ್ನುಂಟುಮಾಡಬೇಕು—ಎಂದು ಯೋಚಿಸಿದನು.

ಬಳಿಕ ದೂತರನ್ನು ಕರೆದು 'ಇಂದು ಮೊದಲುಗೊಂಡು ಬರುವ ಬಹುಳ ಪಂಚಮಿಯವರೆಗೂ ಈ ಪುರದಲ್ಲಿ ಬೆಳದಿಂಗಳು ಉತ್ಸವವನ್ನು ಆಚರಿಸಲಿ. ನಗರವು ಶೃಂಗಾರವಾಗಲಿ. ಅರಮನೆಯು ಅತ್ಯಂತ ಸುಂದರವಾಗಿ ಅಲಂಕರಿಸಲ್ಪಡಲಿ. ದೇವಾಲಯಗಳಲ್ಲಿ ವಿಶೇಷ ಪೂಜೆ ಜರುಗಲಿ. ವಿದ್ವಾಂಸರಿಗೂ ಕಲಾವಿದರಿಗೂ ಅಧಿಕಾರಿಗಳಿಗೂ ವಸ್ತ್ರಭೂಷಣಗಳನ್ನು ಕಳುಹಿಸಲಿ. ನೃತ್ಯ, ಸಂಗೀತ, ಸಾಹಿತ್ಯ ಮೊದಲಾದ ಗೋಷ್ಠಿಗಳು ಪುರಜನರಿಗೆ ಸಂತೋಷವನ್ನುಂಟುಮಾಡಲಿ. ದೀನಾನಾಥರಿಗೆ ವಿಶೇಷವಾಗಿ ಅನ್ನಸಂತರ್ಪಣೆ ನಡೆಯಲಿ. ಪುರದ ಆಬಾಲವೃದ್ಧ ಸ್ತ್ರೀಪುರುಷರೆಲ್ಲರೂ ಆನಂದದಿಂದ ನಲಿಯಲಿ' ಎಂದು ಡಂಗುರ ಹಾಕಿ ಸಾರುತ್ತಾ ಬನ್ನಿರೆಂದು ಆಜ್ಞಾಪಿಸಿದನು.

ಚಾಣಕ್ಯನಿಗೆ ಸಮಾಚಾರ ಗೊತ್ತಾಯಿತು. ಏನೋ ಯೋಚಿಸಿ ಶಿಷ್ಯನ

ಮೂಲಕ ದೂತರಿಗೆ 'ಈಗ ಉತ್ಸವವನ್ನು ಆಚರಿಸುವ ಅಗತ್ಯವಿಲ್ಲ. ಸಾರುವುದನ್ನು ನಿಲ್ಲಿಸಿ ಹಿಂದಿರುಗಿ ಹೋಗುವುದು. ಇದು ನನ್ನಾಜ್ಞೆ.' ಎಂದು ಹೇಳಿ ಕಳುಹಿಸಿದನು. ರಾಜಭಟರು ಹೆದರಿ ಸಾರುವುದನ್ನು ನಿಲ್ಲಿಸಿ ಹಿಂದಿರುಗಿದರು. ಅದನ್ನು ಕಂಡು ಜನರಿಗೆ ಬಹಳ ಆಶ್ಚರ್ಯವಾಯಿತು. ಚಾಣಕ್ಯನಿಗೂ ಚಂದ್ರಗುಪ್ತನಿಗೂ ಏನೋ ಮನಸ್ತಾಪವುಂಟಾಗಿರಬಹುದೆಂದು ಗುಟ್ಟಾಗಿ ಮಾತನಾಡಿಕೊಳ್ಳುತ್ತಿದ್ದರು.

ಆಗ ಚಾಣಕ್ಯನ ಶಿಷ್ಯನಾದ ಶಾರ್ಙ್ಗರವನು 'ಆಚಾರ್ಯರೆ, ರಾಜಾಜ್ಞೆಗೆ ವಿರೋಧವಾಗಿ ತಾವು ಮಹೋತ್ಸವವನ್ನು ನಿಲ್ಲಿಸಿದುದರ ಅರ್ಥವೇನೆಂಬುದನ್ನು ತಿಳಿಯಲು ಕುತೂಹಲವುಳ್ಳವನಾಗಿದ್ದೇನೆ. ಪ್ರಯೋಜನವಿಲ್ಲದ ಯಾವ ಕಾರ್ಯವನ್ನೂ ತಾವು ಆಚರಿಸುವವರಲ್ಲ. ನಾನು ಇದನ್ನು ತಿಳಿಯುವುದರಲ್ಲಿ ಯಾವ ದೋಷವೂ ಇಲ್ಲದ ಪಕ್ಷದಲ್ಲಿ ಕೃಪೆಯಿಟ್ಟು ಶಿಷ್ಯನಲ್ಲಿ ಅನುಗ್ರಹ ಮಾಡಬೇಕು.' ಎಂದು ಪ್ರಾರ್ಥಿಸಿಕೊಂಡನು.

ಅದಕ್ಕೆ ಚಾಣಕ್ಯನು 'ಶಾರ್ಙ್ಗರವ, ನೀನು ನನಗೆ ಅತ್ಯಂತ ಆಪ್ತ ಶಿಷ್ಯನಾದ ಕಾರಣ ಅದರ ನಿಮಿತ್ತವನ್ನು ಹೇಳುತ್ತೇನೆ ಕೇಳು. ಚಂದ್ರಗುಪ್ತನ ಕಾರ್ಯಾರ್ಥವಾಗಿಯೇ ನಾನು ಈ ಉತ್ಸವವನ್ನು ನಿಲ್ಲಿಸಿರುವೆನು. ಈಗ ನಾನು ಸಿದ್ಧಾರ್ಥಕನ ಕೈಯಲ್ಲಿ ಶಕಟದಾಸನ ಹಸ್ತಾಕ್ಷರದಿಂದ ಬರೆಸಿದ ಕಾಗದಕ್ಕೆ ರಾಕ್ಷಸನ ಮುದ್ರೆಯುಂಗುರದ ಮೊಹರು ಮಾಡಿಸಿ ಕಳುಹಿಸಿದ್ದೇನೆ. ಅದು ಸಕಾಲದಲ್ಲಿ ಕುಸುಮಪುರದ ಮೇಲೆ ದಂಡೆತ್ತಿ ಬಂದು ಬಿಡಾರ ಮಾಡುವ ಮಲಯಕೇತುವಿನ ದಂಡಿನ ಉಕ್ಕಡದಬಳಿ ಸಿಕ್ಕುವಂತೆ ಏರ್ಪಾಡುಮಾಡಿರುವೆನು. ಮಲಯಕೇತುವು ಅದನ್ನು ನೋಡಿದರೆ, ಚಂದ್ರಗುಪ್ತನು ಬರೆದು ಕಳುಹಿಸಿದ ಕಾಗದಕ್ಕೆ ಪ್ರತಿಯಾಗಿ ರಾಕ್ಷಸನು ಅವನಿಗೆ ಬರೆದುದೆಂಬಂತೆ ತೋರುವುದಲ್ಲದೆ, ಅಮಾತ್ಯನು ಮಂತ್ರಿತ್ವವನ್ನು ಅಪೇಕ್ಷಿಸಿರುವಂತೆ ಅರ್ಥವಾಗುವುದು. ಆಗ ಮಲಯಕೇತುವು ರಾಕ್ಷಸನು ವಂಚಕನೆಂದು ಭಾವಿಸಿ ಅವನನ್ನು ಅಲ್ಲಿಂದ ಹೊರಡಿಸುವುದು ನಿಶ್ಚಯ. ನನಗೂ ಚಂದ್ರಗುಪ್ತನಿಗೂ ಸ್ನೇಹವಿರುವುದೆಂಬುದು ಸಿದ್ಧವಿರುವುದಾದರೆ, ಅಮಾತ್ಯನ ದ್ವೇಷಿಗಳಾರೋ ತನಗೂ ಅಮಾತ್ಯನಿಗೂ ಭೇದ ಕಲ್ಪಿಸಲು ಮಾಡಿರುವ ಕುತಂತ್ರವೆಂದು ತಿಳಿದು ಸುಮ್ಮನಾಗುವನು. ಹಾಗಾದರೆ ನನ್ನ ಯೋಚನೆಯೆಲ್ಲಾ ಹಾಳಾಗುವುದು. ಆದಕಾರಣ ಆ ಕಾಗದವನ್ನು

ಓದುವ ವೇಳೆಗೆ ನನಗೂ ಚಂದ್ರಗುಪ್ತನಿಗೂ ದ್ವೇಷವುಂಟಾಗಿದೆಯೆಂದು ಲೋಕದಲ್ಲಿ ಪ್ರಸಿದ್ಧವಾಗಿದ್ದರೆ–ಚಾಣಕ್ಯ ಚಂದ್ರಗುಪ್ತರಿಗೆ ಪ್ರಬಲ ವಿರೋಧವುಂಟಾಗಿರುವುದರಿಂದ ಚಂದ್ರಗುಪ್ತನು ಚಾಣಕ್ಯನನ್ನು ಮಂತ್ರಿ ಪದವಿಯಿಂದ ತಪ್ಪಿಸಿ, ರಾಕ್ಷಸನನ್ನು ಮಂತ್ರಿಯನ್ನಾಗಿ ಮಾಡಿಕೊಳ್ಳಲು ಕಾಗದ ಬರೆದಿರಬೇಕು. ಅದಕ್ಕೆ ಸಮ್ಮತಿಸಿ ಈ ಲೇಖನವನ್ನು ರಾಕ್ಷಸನು ಚಂದ್ರಗುಪ್ತನಿಗೆ ಬರೆದು ಕಳುಹಿಸುತ್ತಿರಬೇಕು–ಎಂದು ನಿಶ್ಚಯಿಸಿ ನಮ್ಮ ಕಡೆಯವರಾಗಿ ಮಲಯಕೇತುವಿನ ಬಳಿ ಆಪ್ತರಂತೆ ವರ್ತಿಸುತ್ತಿರುವ ಭಾಗುರಾಯಣಾದಿಗಳ ಸಲಹೆಯಂತೆ ರಾಕ್ಷಸನನ್ನು ಪಾಳೆಯದಿಂದ ಹೊರಡಿಸುವನು. ಆ ಬಳಿಕ ಅಮಾತ್ಯನು ತಾನಾಗಿ ಇಲ್ಲಿಗೆ ಬರುವಂತೆ ಬೇರೆ ಪ್ರಯತ್ನ ಮಾಡುವೆನು. ಅದಕ್ಕಾಗಿ ಅಂತಃಕಲಹವುಂಟಾಗಿದೆಯೆಂಬುದು ಶತ್ರುಪಕ್ಷದಲ್ಲಿ ಪ್ರಸಿದ್ಧವಾಗಲೆಂದೇ ಈ ಉತ್ಸವವನ್ನು ನಿಲ್ಲಿಸಿದೆನಲ್ಲದೆ ಚಂದ್ರಗುಪ್ತನಿಗೆ ಅಪಮಾನ ಮಾಡಲೆಂಬ ದುರುದ್ದೇಶದಿಂದಲ್ಲ. ಮುಂದೆ ಈ ಕಾರಣವಾಗಿ ಚಂದ್ರಗುಪ್ತನೊಡನೆ ಕೃತಕಕಲಹವಾಗುವುದನ್ನು ನೋಡಿ ನೀನೇ ಆಶ್ಚರ್ಯಪಡುವೆ.' ಎಂದು ತನ್ನ ಮನೋಗತವನ್ನು ತಿಳಿಸಿದನು.

ಅತ್ತ ಹಾವಾಡಿಗನ ವೇಷದಿಂದ ಪಾಟಲೀಪುರದ ಸಮಾಚಾರವನ್ನು ಸಂಗ್ರಹಿಸಿದ ವಿರಾಧಗುಪ್ತನೆಂಬ ರಾಕ್ಷಸನ ಗೂಢಚಾರನು ಅಮಾತ್ಯನನ್ನು ಕಂಡು ರಹಸ್ಯವಾಗಿ ತಾನು ತಂದ ಸಂಗತಿಯನ್ನು ವರದಿ ಮಾಡಿದನು.

"ಸ್ವಾಮಿ, ಚಾಣಕ್ಯನು ಪರ್ವತರಾಜನ ತಮ್ಮನಾದ ವಿರೋಚನನಿಗೆ ಅರ್ಧ ರಾಜ್ಯ ಕೊಡುವನೆಂದು ಓಡಿ ಹೋಗುತ್ತಿದ್ದ ಅವನನ್ನು ಕರೆಸಿ ಸಮರಾತ್ರಿಯಲ್ಲಿ ಲಗ್ನ ನಿಶ್ಚಯಮಾಡಿ ಅಭಿಷೇಕ ಮಾಡಿಸಿದನು. ಬಳಿಕ ಪಟ್ಟದಾನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸುವ ಸಮಯದಲ್ಲಿ ತಮ್ಮಿಂದ ನಿಯುಕ್ತನಾಗಿದ್ದ ದಾರುವರ್ಮನು ಆನೆಯ ಮೇಲೆ ಬರುತ್ತಿರುವವನು ಚಂದ್ರಗುಪ್ತನೆಂದು ತಿಳಿದು ಕಪಟಶಿಲ್ಪದ ಕೀಲು ಸಡಿಲಿಸಲು ಆಗ ಭಾರವಾದ ತೊಲೆ ಆಯತಪ್ಪಿ ಮಾವಟಿಗನ ಮೇಲೆ ಬೀಳಲು ಅವನು ಅದರಿಂದ ಸತ್ತನು. ಅದನ್ನು ಕಂಡು ದಾರುವರ್ಮನು ತನ್ನ ಕೈಕೊಡತಿಯಿಂದ ವಿರೋಚನನನ್ನು ಸಂಹರಿಸಲು ಸುತ್ತಲಿದ್ದ ರಾಜಭಟರು ಶಿಲ್ಪಿಯನ್ನು ಭಲ್ಲೆಯಗಳಿಂದ ತಿವಿದು ಕೊಂದರು ಶಯನಗೃಹದಲ್ಲಿ ಪಟದ ಗೂಡಿನಲ್ಲಿದ್ದ ಶಸ್ತ್ರವನ್ನು ಕಂಡು ಭವನಪಾಲಕನನ್ನು ದಂಡಿಸಿ ನಿಲುವುಗನ್ನಡಿಯ ಹಿಂದಿನ ಸುರಂಗಕ್ಕೆ ಬೆಂಕಿ ಹತ್ತಿಸಲು ಅಲ್ಲಿ

ಅಡಗಿದ್ದ ಶಸ್ತ್ರಪಾಣಿಗಳಾದ ಚೋರರು ವಿಧಿವಶರಾದರು. ವಿಷಚೂರ್ಣವನ್ನು ತಾನೇ ಸೇವಿಸಬೇಕಾಗಿ ಬಂದು ವಿಷವೈದ್ಯನೂ ಗತಿಸಿದನು. ಎಲ್ಲಾ ವಿಪತ್ತುಗಳೂ ಚಂದ್ರಗುಪ್ತನಿಗೆ ತಪ್ಪಿ ನಮ್ಮ ಜನರಿಗೇ ಸಂಭವಿಸಿದುವು."

ಅಮಾತ್ಯನು ಅದನ್ನು ಕೇಳಿ ಕಳವಳಗೊಂಡನು. ಚಂದ್ರಗುಪ್ತನಿಗೆ ದೈವಬಲ ಚೆನ್ನಾಗಿದ್ದುದರಿಂದಲೇ ಅವನು ಬದುಕಿದನಲ್ಲದೆ ಬೇರೆಯಿಲ್ಲವೆಂದು ಚಿಂತೆಗೊಳಗಾದನು.

'ಪೂಜ್ಯರೆ, ಚಾಣಕ್ಯನು ವಿಷಕನ್ಯಾಮುಖದಿಂದ ಪರ್ವತರಾಜನ ಮರಣಕ್ಕೆ ಕಾರಣನಾದನೆಂದು ಕ್ಷಪಣಕನನ್ನು ಪುರದಿಂದ ಹೊರಡಿಸಿದನು.'

'ಚಾಣಕ್ಯನು ತನಗೆ ಬರುವ ಅಪವಾದವನ್ನು ನಮ್ಮ ಮೇಲೆ ಹೊರಿಸಲು ಈ ಕೆಲಸ ಮಾಡಿದ್ದಾನೆ. ಯೋಚಿಸಿ ನೋಡಿದರೆ ಅವನು ಮಾಡುವ ಒಂದೊಂದು ಕೆಲಸವೂ ಬಹುವಿಧ ಫಲವನ್ನುಂಟುಮಾಡುತ್ತಿದೆ.' ಎಂದು ರಾಕ್ಷಸನು ಅಭಿಪ್ರಾಯ ಪಟ್ಟನು.

'ದಾರುವರ್ಮಾದಿಗಳಿಗೆ ಸಹಾಯಕನೆಂಬ ಕಾರಣದಿಂದ ಶಕಟದಾಸನನ್ನು ಶೂಲಕ್ಕೇರಿಸುವಂತೆ ಆಜ್ಞೆ ಮಾಡಿದನು. ಚಂದನದಾಸನನ್ನು ತಮ್ಮ ಹೆಂಡತಿ ಮಕ್ಕಳನ್ನು ವಶಪಡಿಸಲಿಲ್ಲೆಂದು ಸೆರೆಮನೆಗೆ ಕಳುಹಿಸಿದ್ದಾನೆ. ಆ ಚಾಣಕ್ಯನು ಮುಂದೆ ಯಾರಿಗೆ ಏನು ಮಾಡುವನೋ ತಿಳಿಯುವುದೇ ಕಷ್ಟವಾಗಿದೆ. ಆತನು ಮಹಾ ತಂತ್ರಜ್ಞ.'

ಪಾಟಲೀಪುರದಲ್ಲಿ ತನ್ನ ಮಿತ್ರವರ್ಗಕ್ಕೆ ಚಾಣಕ್ಯನಿಂದ ಉಂಟಾದ ತೊಂದರೆಗಳನ್ನು ಕೇಳಿ ಅಮಾತ್ಯನು ಮುಂದೇನು ಮಾಡಬೇಕೆಂದು ತಿಳಿಯದೆ ಚಿಂತಾಕ್ರಾಂತನಾದನು. ಹೀಗೆ ಸಂತಾಪ ಪಡುತ್ತಿದ್ದ ಸಮಯದಲ್ಲೇ ದೂತನು ಬಂದು ಶಕಟದಾಸನು ಬಂದಿರುವ ಸಮಾಚಾರ ತಿಳಿಸಿದನು. ಶಕಟದಾಸನು ರಾಕ್ಷಸನಿಗೆ ಸಿದ್ಧಾರ್ಥಕನು ವಧ್ಯಸ್ಥಾನದಿಂದ ತನ್ನನ್ನು ಬಿಡಿಸಿ ಅಲ್ಲಿಗೆ ಕರೆತಂದ ವಿಷಯವನ್ನು ವಿವರಿಸಿದನು. ಆಗ ಅಮಾತ್ಯನು ಸಿದ್ಧಾರ್ಥಕನು ಮಾಡಿದ ಮಹೋಪಕಾರಕ್ಕಾಗಿ ಪ್ರೀತಿಸಿ ತಾನು ಧರಿಸಿದ್ದ ದಿವ್ಯಾಭರಣಗಳನ್ನು ಅವನಿಗೆ ಬಹುಮಾನವಾಗಿ ತೆಗೆದುಕೊಟ್ಟನು.

ಸಿದ್ಧಾರ್ಥಕನು ಬಹಳ ಕೃತಜ್ಞನಂತೆ ವರ್ತಿಸುತ್ತ ಆ ವಿಭೂಷಣಗಳನ್ನು ರಾಕ್ಷಸನ ಬಳಿಯೇ ಇಟ್ಟಿರುವಂತೆಯೂ ತನಗೆ ಬೇಕಾದಾಗ ಅದನ್ನು ತೆಗೆದು

ಕೊಳ್ಳುವುದಾಗಿಯೂ ಹೇಳಿ ಆ ಒಡವೆಗಳನ್ನು ಅಮಾತ್ಯನ ಬಳಿಯೇ ಇಟ್ಟಿರುವಂತೆ ಕೇಳಿಕೊಂಡನು. ರಾಕ್ಷಸನ ಅಪ್ಪಣೆಯಂತೆ ಶಕಟದಾಸನು ಆ ಆಭರಣಗಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಅದಕ್ಕೆ ಮೊಹರು ಮಾಡಲು ಪ್ರಯತ್ನಿಸುತ್ತಿರಲು ಸಿದ್ಧಾರ್ಥಕನು ಅದೇ ಸಮಯವೆಂದು ಚಾಣಕ್ಯನು ತನಗೆ ಕೊಟ್ಟು ಕಳುಹಿಸಿದ್ದ ಉಂಗುರವನ್ನು ಶಕಟದಾಸನಿಗೆ ಕೊಟ್ಟು ಅದರಿಂದ ಆ ಮಂಜೂಷವನ್ನು ಮೊಹರು ಮಾಡುವಂತೆ ಹೇಳಿದನು. ಶಕಟದಾಸನು ಆ ಅಂಗುಲೀಯಕದಲ್ಲಿ ರಾಕ್ಷಸನ ಹೆಸರು ಕೆತ್ತಿರುವುದನ್ನು ಕಂಡು ಅದನ್ನು ಅಮಾತ್ಯನಿಗೆ ತೋರಿಸಿದನು. ತನ್ನ ಉಂಗುರವು ಅವನಿಗೆ ಹೇಗೆ ದೊರಕಿತೆಂದು ಸಂಶಯಪಟ್ಟು ಅಮಾತ್ಯನು 'ಸಿದ್ಧಾರ್ಥಕ, ಈ ಉಂಗುರ ನಿನಗೆಲ್ಲಿ ದೊರಕಿತು?' ಎಂದು ಪ್ರಶ್ನಿಸಲು ಅವನು—ಚಂದನದಾಸನ ಪಡಸಾಲೆಯ ಬಳಿ ನನಗೆ ಸಿಕ್ಕಿತು. ಇದನ್ನು ನಾನು ಇಟ್ಟುಕೊಂಡೆ—ಎಂದು ಉತ್ತರ ಹೇಳಲು ಅಮಾತ್ಯನು—ಸದ್ಯ ಇವನಿಗೆ ಸಿಕ್ಕಿದ್ದು ಒಳ್ಳೆಯದೇ ಆಯಿತು. ಶತ್ರುಗಳಿಗೇನಾದರೂ ಸಿಕ್ಕಿದ್ದಿದ್ದರೆ ಮೋಸವಾಗುತ್ತಿತ್ತು—ಎಂದು ಯೋಚಿಸಿದನು.

ರಾಕ್ಷಸನ ಹೆಸರಿದ್ದ ಆ ಉಂಗುರವನ್ನು ಶಕಟದಾಸನ ಮಾತಿನಂತೆ ಸಿದ್ಧಾರ್ಥಕನು ಸಂತೋಷದಿಂದ ಅಮಾತ್ಯನಿಗೇ ಕೊಟ್ಟನು. ರಾಕ್ಷಸನು ಸಂತೋಷದಿಂದ ಅದನ್ನು ಸ್ವೀಕರಿಸಿದನು. ಅದನ್ನು ಶಕಟದಾಸನ ವಶಕ್ಕೆ ಕೊಟ್ಟು 'ಇನ್ನು ಮುಂದೆ ಕಾಗದ ಪತ್ರಗಳಿಗೆಲ್ಲಾ ಈ ಉಂಗುರದ ಮುದ್ರೆಯನ್ನು ಒತ್ತಿ ಕಳುಹಿಸುತ್ತಿರು. ಈ ಆಭರಣಗಳ ಪೆಟ್ಟಿಗೆಗೂ ಇದರಿಂದಲೇ ಮೊಹರು ಮಾಡಿ ಇಡಿಸು' ಎಂದು ಹೇಳಿದನು. ಸಿದ್ಧಾರ್ಥಕನ ಪ್ರಾರ್ಥನೆಯಂತೆ ಅಮಾತ್ಯನು ಅವನನ್ನು ತನ್ನ ಬಳಿಯೇ ಇರಿಸಿಕೊಳ್ಳಲು ಒಪ್ಪಿದನು.

## ಕಪಟ ಕಲಹ

ಪಾಟಲೀಪುರದಲ್ಲಿ ಚಂದ್ರಗುಪ್ತನು ಕೌಮುದೀಮಹೋತ್ಸವವು ಚಾಣಕ್ಯನಿಂದ ನಿಲ್ಲಿಸಲ್ಪಟ್ಟ ಸಂಗತಿಯನ್ನು ತಿಳಿದು ಮನಸ್ಸಿನಲ್ಲಿ 'ಚಾಣಕ್ಯರು ಯಾವ ನಿಮಿತ್ತವಾಗಿ ನನ್ನ ಆಜ್ಞಾಭಂಗ ಮಾಡಿದರೋ ತಿಳಿಯದು. ಅವರು ಯಾವ ಕಾರ್ಯ ಮಾಡಿದರೂ ಅದು ನನ್ನ ಶ್ರೇಯಸ್ಸಿಗಾಗಿಯೇ ಎಂಬುದರಲ್ಲಿ ಅನುಮಾನವಿಲ್ಲ. ಅವರ ಮನೋಗತದಂತೆಯೇ ನಡೆಯಬೇಕಾದುದು ನನ್ನ ಕರ್ತವ್ಯ.

ಈಗ ಅವರನ್ನೇ ಕಂಡು ವಿಷಯವನ್ನು ಅರ್ಥಮಾಡಿಕೊಳ್ಳುವುದೊಳ್ಳೆಯದು.' ಎಂದು ಯೋಚಿಸಿದನು. ವೈತಾಳಿಕನಿಗೆ 'ಅಮಾತ್ಯರಿಗೆ ನನ್ನ ಅನಂತ ವಂದನೆಗಳನ್ನು ತಿಳಿಸಿ, ಕಾರ್ಯ ಗೌರವವು ಅಡ್ಡಿಯಾಗದಿದ್ದಲ್ಲಿ ಚಂದ್ರಗುಪ್ತನು ತಮ್ಮ ದರ್ಶನವನ್ನು ಅಪೇಕ್ಷಿಸುವನು.' ಎಂದು ಅರಿಕೆ ಮಾಡಿಬರುವಂತೆ ಆಣತಿಯಿತ್ತನು.

ಚಾಣಕ್ಯನು ಚಂದ್ರಗುಪ್ತನೊಡನೆ ಕಪಟ ಕಲಹವನ್ನು ಮಾಡಿ ಶತ್ರು ಪಕ್ಷದವರಿಗೆ ತಮ್ಮಿಬ್ಬರಿಗೂ ಪ್ರಬಲ ವಿರೋಧವುಂಟಾಗಿರುವುದೆಂದು ತೋರ್ಪಡಿಸಿಕೊಳ್ಳುವುದಕ್ಕೆ ತಕ್ಕ ಸಮಯವೆಂದು ನೆನಸಿ ಸುಗಾಂಗವೆಂಬ ಚಂದ್ರಗುಪ್ತನ ಅರಮನೆಗೆ ಬಂದನು. ಮೌರ್ಯಪುತ್ರನು ಪೀಠದಿಂದೆದ್ದು ಆತನ ಪಾದಗಳಿಗೆ ವಂದಿಸಿ, ಸ್ವರ್ಣಪೀಠದಲ್ಲಿ ಕುಳ್ಳಿರಿಸಿ ಬಳಿಕ ತಾನು ಕುಳಿತುಕೊಂಡನು.

"ಕುಮಾರ, ಈಗ ನನ್ನನ್ನು ಕರೆಸಿದ ನಿಮಿತ್ತವೇನು ?"

"ತಮ್ಮ ದರ್ಶನ ಲಾಭದಿಂದ ಸಂತೋಷ ಹೊಂದುವುದಕ್ಕಾಗಿ."

"ಈ ಅತಿ ವಿನಯವು ಹಾಗಿರಲಿ. ಕಾರಣವಿಲ್ಲದೆ ಕರೆಯಿಸುವುದುಂಟೆ ?"

"ಆರ್ಯರೆ, ಕೌಮುದೀಮಹೋತ್ಸವವು ನಿಲ್ಲಿಸಲ್ಪಟ್ಟ ಕಾರಣವನ್ನು ತಮ್ಮಿಂದ ತಿಳಿಯಲಿಚ್ಛಿಸುವೆನು."

"ಹಾಗಾದರೆ ಈ ಆಕ್ಷೇಪಣೆಯನ್ನು ನನ್ನ ಮೇಲೆ ಹೊರಿಸುವುದಕ್ಕಾಗಿ ಕರೆಯಿಸಲಾಯಿತೋ ? ಅರಸೆ, ಚಾಣಕ್ಯನು ಸ್ವಪ್ನದಲ್ಲೂ ಪ್ರಯೋಜನವಿಲ್ಲದ ಕಾರ್ಯವನ್ನು ಮಾಡುವವನಲ್ಲವೆಂಬುದು ತಿಳಿದಿಲ್ಲವೆ ?"

"ಆ ಪ್ರಯೋಜನವನ್ನು ತಿಳಿಯುವುದಕ್ಕಾಗಿಯೇ ತಮ್ಮ ದರ್ಶನವನ್ನು ಬಯಸಿದೆ."

"ಈ ವಿಚಾರವನ್ನು ಕಟ್ಟಿಕೊಂಡು ನಿನಗೇನಾಗಬೇಕು. ಅದನ್ನೆಲ್ಲಾ ನಾನೇ ವಿಚಾರಿಸಿಕೊಳ್ಳುತ್ತೇನೆ."

ಆ ಮಾತಿಗೆ ಚಂದ್ರಗುಪ್ತನು ಬೇಸರಪಟ್ಟುಕೊಂಡವನಂತೆ ಮುಖ ತಿರುಗಿಸಲು ರಾಕ್ಷಸನಿಂದ ನಿಯುಕ್ತರಾಗಿದ್ದ ಕಲಶಕ ವಿಜಯರೆಂಬ ಸ್ತುತಿಪಾಠಕರು ಚಂದ್ರಗುಪ್ತನ ಕೀರ್ತಿಯನ್ನು ಹೊಗಳಲು ಪ್ರಾರಂಭಿಸಿದರು. ಚಾಣಕ್ಯನು ಅದನ್ನು ಗ್ರಹಿಸಿ ಆ ವಂದಿಗಳು ರಾಕ್ಷಸನ ಕಡೆಯುವರಾಗಿರಬೇಕೆಂದು ನಿಶ್ಚಯಿಸಿದನು. ಆಗ ಚಂದ್ರಗುಪ್ತನು ಸ್ತುತಿಪಾಠಕರಿಗೆ

ಬಹು ದ್ರವ್ಯ ಬಹುಮಾನವನ್ನು ಕೊಡುವಂತೆ ಅಧಿಕಾರಿಗಳಿಗೆ ಅಪ್ಪಣೆ ಮಾಡಿದನು.

ಚಾಣಕ್ಯನು ಹುಬ್ಬುಗಂಟಿಕ್ಕಿ ಅರಸೆ, 'ಅನ್ಯಾಯವಾಗಿ ಹೀಗೆ ಪೋಲು ವೆಚ್ಚ ಮಾಡಕೂಡದು. ಈ ವಂದಿಗಳಿಗೆ ದ್ರವ್ಯ ಕೊಡಬೇಕಾದ ಅಗತ್ಯವಿಲ್ಲ.' ಎಂದು ಕೋಪಿಸಿಕೊಂಡವನಂತೆ ಕ್ರೂರವಾಗಿ ನುಡಿದನು.

ಬುದ್ಧಿವಂತನಾದ ಚಂದ್ರಗುಪ್ತನು ಚಾಣಕ್ಯನ ಇಂಗಿತವನ್ನು ಗ್ರಹಿಸಿದನು. 'ಕಪಟ ಕಲಹದ ಮೂಲಕ ನಮ್ಮಿಬ್ಬರಿಗೆ ವಿರೋಧವುಂಟಾಗಿರುವುದನ್ನು ಇಲ್ಲಿ ಯಾರಾದರೂ ಶತ್ರು ಪಕ್ಷದವರಿದ್ದರೆ ಅವರಿಗೆ ಗೊತ್ತಾಗಿ, ಅದು ರಾಕ್ಷಸನಿಗೂ ತಿಳಿಯಲೆಂದು ಅವರು ಯೋಚಿಸಿದಂತೆ ತೋರುತ್ತಿದೆ. ಈಗ ನಾನು ಅವರ ಮೇಲೆ ಕೋಪಿಸಿಕೊಂಡಂತೆ ವರ್ತಿಸಿದರೂ ಅದನ್ನು ತಪ್ಪಾಗಿ ಭಾವಿಸಲಾರರು. ಅನಂತರ ಅವರ ಕ್ಷಮೆಯನ್ನು ಯಾಚಿಸಿದರಾಯಿತು.' ಎಂದು ನಿರ್ಧರಿಸಿಕೊಂಡು 'ಅಮಾತ್ಯರೆ, ನನ್ನ ಕೆಲಸಗಳಿಗೆಲ್ಲಾ ನೀವು ಬೇಕೆಂದೇ ಅಡ್ಡಿಮಾಡುತ್ತಿರುವಿರಿ. ಹೀಗಾದರೆ ಇದು ಪ್ರಭುತ್ವವಲ್ಲ; ಕಾರಾಗೃಹವೆಂದು ತಿಳಿಯಬೇಕಲ್ಲವೆ?' ಎಂದು ಉತ್ತರಕೊಟ್ಟನು.

"ಇದು ಅಪಮಾನವೆಂದು ಭಾವಿಸುವುದಾದರೆ ಈ ರಾಜ್ಯಭಾರ ನೀನೇ ನೋಡಿಕೊ. ನಮ್ಮ ಕಾರ್ಯದಲ್ಲಿ ನಾವು ಜಾಗೃತರಾಗಿರುವೆವು."

"ಹಾಗೆ ಹೇಳುವುದಾದರೆ ಇನ್ನು ಮುಂದೆ ನನ್ನ ರಾಜ್ಯ ವಿಚಾರ ನಾನೇ ನೋಡಿಕೊಳ್ಳುತ್ತೇನೆ. ತಮಗೆ ಆ ಶ್ರಮ ಬೇಡ. ಅಮಾತ್ಯರಾಕ್ಷಸನು ಅಮಾತ್ಯ ಪದವಿಯಲ್ಲಿ ಮಹಾಚತುರನೆಂದು ಹೇಳುತ್ತಿದ್ದರು. ಅದು ನಿಜವಿರಬೇಕು."

"ರಾಜನೆ, ರಾಕ್ಷಸನು ಬುದ್ಧಿಶಾಲಿಯೆಂದು ಹೇಳಿದುದರಿಂದ ನಾವು ಬುದ್ಧಿಹೀನರೆಂದು ಹೇಳಿದಂತಾಯಿತು. ಆ ರಾಕ್ಷಸನಿದ್ದಾಗಲೇ ನಂದರನ್ನು ನನ್ನ ಬುದ್ಧಿಶಕ್ತಿಯಿಂದ ನಿಗ್ರಹಿಸಿದರೂ ನಿನಗೆ ರಾಕ್ಷಸನೇ ಹೆಚ್ಚೆಂದು ತೋರುತ್ತಿದೆಯಲ್ಲವೆ? ಹಾಗಾದರೆ ನನ್ನ ಕ್ರೋಧಾಗ್ನಿ ಇನ್ನೂ ಶಮನವಾಗಿಲ್ಲವೆಂದು ತಿಳಿಯಬೇಕಾಗಿದೆ."

"ಸ್ವಾಮಿ, ನಂದವಿದ್ವೇಷಿಯಾದ ದೈವವೇ ಅವರನ್ನು ನಾಶ ಮಾಡಿತಲ್ಲದೆ ಮತ್ತೊಬ್ಬರಿಂದ ಅದು ಸಾಧ್ಯವಾಗುವುದುಂಟೆ?"

" ಪೌರುಷಹೀನರು ದೈವವೇ ಪ್ರಮಾಣವೆಂದು ಹೇಳುವರು."

" ವಿದ್ವಾಂಸರು ಹೀಗೆ ಆತ್ಮಸ್ತುತಿ ಮಾಡಿಕೊಳ್ಳುವುದುಂಟೆ ? "

" ಅರಸೆ, ನಮ್ಮನ್ನು ಭೃತ್ಯರಂತೆ ಕಂಡು ತಿರಸ್ಕಾರದ ಮಾತನ್ನಾಡುತ್ತಿರುವೆ. ಇನ್ನು ನಿನ್ನಲ್ಲಿ ವಾದಮಾಡಿ ಉಪಯೋಗವಿಲ್ಲ. ನಮಗಿಂತಲೂ ರಾಕ್ಷಸನೇ ಬುದ್ಧಿಶಾಲಿಯೆಂದು ಭಾವಿಸುವುದಾದರೆ ಅವನೇ ಇಲ್ಲಿ ಮಂತ್ರಿಯಾಗಿ ಕಾರ್ಯನಿರ್ವಾಹಮಾಡಲಿ. ನ್ನು ನನಗೆ ಇಲ್ಲಿ ಕೆಲಸವಿಲ್ಲ. ಇದೋ ಈ ಸಚಿವಲಾಂಛನ ಶಸ್ತ್ರವನ್ನು ತೆಗೆದುಕೊ." ಎಂದು ಚಾಣಕ್ಯನು ಅದನ್ನು ಚಂದ್ರಗುಪ್ತನ ಮುಂದಿಟ್ಟು ರಾಜಗೃಹದಿಂದ ಎದ್ದು ಹೊರಟುಹೋದನು.

ಚಂದ್ರಗುಪ್ತನು ವೈತಾಳಿಕನಿಗೆ ' ಈ ದಿನ ಮೊದಲುಗೊಂಡು ಚಾಣಕ್ಯರನ್ನು ಮಂತ್ರಿ ಪದವಿಯಿಂದ ತೆಗೆದು ನಾವೇ ರಾಜಕಾರ್ಯಗಳನ್ನು ನೋಡಿಕೊಳ್ಳುತ್ತಿರುವುದರಿಂದ ಅಧಿಕಾರಿಗಳು ಚಾಣಕ್ಯರನ್ನು ನೋಡಬೇಕಾಗಿಲ್ಲವೆಂದು ರಾಜಬೀದಿಯಲ್ಲಿ ಘೋಷಿಸತಕ್ಕದ್ದು. ' ಎಂದು ಆಜ್ಞಾಪಿಸಿದನು. ಮನಸ್ಸಿನಲ್ಲಿ—ಪೂಜ್ಯ ಚಾಣಕ್ಯರು ನನ್ನನ್ನು ಕೆಣಕಿ ಹೆಚ್ಚುಮಾತುಗಳನ್ನಾಡಿ ಕೋಪಿಸಿಕೊಂಡವರಂತೆ ಸಚಿವ ಲಾಂಛನವನ್ನು ಬಿಸುಟು ಎದ್ದು ಹೋಗಿರುವುದರಲ್ಲಿ ಏನೋ ಮಹತ್ವ ಪ್ರಯೋಜನವುಂಟು. ಆದರೂ ಅಳುಕುವ ನನ್ನ ಮನಸ್ಸು ಅವರ ಆಶೀರ್ವಾದ ವಚನಗಳಿಂದಲೇ ಶಾಂತವಾಗಬೇಕು—ಎಂದು ಯೋಚಿಸಿದನು.

ರಾಕ್ಷಸನಿಂದ ನಿಯುಕ್ತನಾಗಿದ್ದ ಕರಭಕನೆಂಬ ಗೂಢಚಾರನು ಪಾಟಲೀಪುರದಿಂದ ಪರ್ವತರಾಜ್ಯಕ್ಕೆ ಬಂದು ರಾಕ್ಷಸನನ್ನು ಕಂಡನು. ಪಾಟಲೀಪುರದಲ್ಲಿ ಚಾಣಕ್ಯ ಚಂದ್ರಗುಪ್ತರಿಗೆ ಉಂಟಾದ ಕಲಹವನ್ನೂ ಚಾಣಕ್ಯನು ಸಚಿವ ಲಾಂಛನವನ್ನು ತ್ಯಜಿಸಿದುದನ್ನೂ ವಿಜ್ಞಾಪಿಸಿಕೊಂಡನು. ಅದನ್ನು ಕೇಳಿ ರಾಕ್ಷಸನಿಗೆ ಬಹಳ ಸಂತೋಷವಾಯಿತು. ಇನ್ನು ಚಂದ್ರಗುಪ್ತನನ್ನು ಜಯಿಸುವುದು ಸುಲಭವಾಯಿತೆಂದು ಭಾವಿಸಿದನು. ಚಾಣಕ್ಯನ ತಂತ್ರ ಅವನಿಗೆ ಗೊತ್ತಾಗಲಿಲ್ಲ.

ಬಾಗುರಾಯಣನು ಮಲಯಕೇತುವಿನ ಸಂಪೂರ್ಣ ಪ್ರೀತಿಗೆ ಪಾತ್ರನಾಗಿದ್ದು ಸಮಯ ಸಿಕ್ಕಿದಾಗ ' ರಾಕ್ಷಸನು ಚಂದ್ರಗುಪ್ತನ ವಿರೋಧಿಯಲ್ಲ. ಸಮಯ ಬಂದರೆ ಅವನಿಗೇ ಇವನು ಮಂತ್ರಿಯಾದರೂ ಆಗಬಹುದು. ಅವನ

ಮನಸ್ಸು ಇನ್ನೂ ಆ ಕಡೆಯೇ ಇದ್ದಂತೆ ಕಾಣುತ್ತಿದೆ. ಅವನ ಅಂತರಂಗವನ್ನು ತಿಳಿಯುವುದು ಕಷ್ಟ. ಗೂಢಚಾರರಿಂದ ರಹಸ್ಯವಾಗಿ ವಿಷಯ ಸಂಗ್ರಹಣ ಮಾಡುತ್ತಿದ್ದಾನೆ. ನಾವು ಎಚ್ಚರಿಕೆಯಿಂದಿರುವುದೇ ಒಳ್ಳೆಯದು.' ಇತ್ಯಾದಿ ಹೇಳುತ್ತ ದಿನದಿನಕ್ಕೆ ಮಲಯಕೇತುವಿಗೆ ರಾಕ್ಷಸನ ವಿಷಯದಲ್ಲಿ ಸಂಶಯವು ಹೆಚ್ಚಾಗುವಂತೆ ಮಾಡುತ್ತಿದ್ದನು.

ರಾಕ್ಷಸನು ಮಲಯಕೇತುವಿಗೆ ಚಂದ್ರಗುಪ್ತ ಚಾಣಕ್ಯನಿಗೆ ವಿರೋಧವುಂಟಾಗಿ ಚಂದ್ರಗುಪ್ತನಿಗೆ ಚಾಣಕ್ಯನ ಬೆಂಬಲ ತಪ್ಪಿಹೋದ ಸಂಗತಿಯನ್ನು ಸಂತೋಷದಿಂದ ತಿಳಿಸಿದನು. ಮಲಯಕೇತುವು ರಾಕ್ಷಸನ ವಿಷಯದಲ್ಲಿ ತನಗಿದ್ದ ಸಂಶಯವನ್ನು ತೋರ್ಪಡಿಸಿಕೊಳ್ಳದೆ ಸಂತೋಷವನ್ನು ವ್ಯಕ್ತಪಡಿಸಿ ಗೌಡದೇಶದ ಮೇಲೆ ರಾಕ್ಷಸನ ನಾಯಕತ್ವದಲ್ಲಿ ದಂಡಯಾತ್ರೆ ನಡೆಯಲು ಅನುಮತಿಯಿತ್ತನು. ರಾಕ್ಷಸನು ಚಂದ್ರಗುಪ್ತನನ್ನು ಜಯಿಸಲು ಇದೇ ಸುಸಮಯವೆಂದು ತಿಳಿದು ಸೇನಾನಾಯಕರಿಗೂ ಸಾಮಂತ ರಾಜರಿಗೂ ಯುದ್ಧಕ್ಕೆ ಸಿದ್ಧರಾಗುವಂತೆ ಆಜ್ಞೆಯಿತ್ತನು.

## ಕ್ಷಪಣಕ ದರ್ಶನ

ಮಲಯಕೇತುವಿನ ಕಡೆಯ ಅಪಾರ ಸೈನ್ಯವು ಪಾಟಲೀಪುರಾಭಿಮುಖವಾಗಿ ತೆರಳಲುದ್ಯುಕ್ತವಾಯಿತು. ಆಗ ಪಾಟಲೀಪುರದಿಂದ ಅಪಮಾನಿತನಾಗಿ ಹೊರಡಿಸಲ್ಪಟ್ಟಿದ್ದ ಕ್ಷಪಣಕನು ಬಂದು ರಾಕ್ಷಸನ ಗೃಹದ ಬಳಿ ನಿಂತಿದ್ದನು. ಆ ಸಮಯದಲ್ಲಿ ರಾಕ್ಷಸನು ಸೇನಾಪ್ರಯಾಣಕ್ಕೆ ಉತ್ತಮಲಗ್ನವನ್ನು ತಿಳಿಯಬೇಕೆಂದು ಹೊರಗಡೆ ಯಾರಾದರೂ ಜೋಯಿಸರು ಇದ್ದರೆ ಕರೆತರಬೇಕೆಂದು ಊಳಿಗದವನನ್ನು ಕಳುಹಿಸಿದನು. ಅವನು ಹಿಂದಿರುಗಿ ಬಂದು 'ಜೋಯಿಸರು ಯಾರೂ ಕಾಣಿಸಲಿಲ್ಲ. ಆದರೆ ಕ್ಷಪಣಕನು ಮಾತ್ರ ಬಾಗಿಲಲ್ಲಿ ನಿಂತಿದ್ದಾನೆ.' ಎಂದು ಹೇಳಿದನು. ರಾಕ್ಷಸನು ಮನಸ್ಸಿನಲ್ಲಿ—ಪ್ರಥಮದಲ್ಲೇ ಕ್ಷಪಣಕನ ದರ್ಶನ ಅಪಶಕುನವು. ಆದರೆ ಬೇರೆ ಯಾರೂ ಈ ಸಮಯಕ್ಕೆ ಇಲ್ಲದಿರುವುದರಿಂದ ಅವನನ್ನೇ ಕರೆದು ವಿಜಯಯಾತ್ರೆಗೆ ಹೊರ

ಡಲು ಸರಿಯಾದ ಮುಹೂರ್ತವನ್ನು ತಿಳಿಯೋಣ ' ಎಂದು ಯೋಚಿಸಿಕೊಂಡು ವನನ್ನೇ ಕರೆಯಿಸಿದನು.

ಕ್ಷಪಣಕನು ಅಮಾತ್ಯನನ್ನು ಕಂಡು ಪಾಟಲೀಪುರದಲ್ಲಿ ತನಗೆ ಚಾಣಕ್ಯನಿಂದ ಒದಗಿದ ಅಪಮಾನವನ್ನು ಹೇಳಿಕೊಂಡು ವ್ಯಾಕುಲಚಿತ್ತನಾದಂತೆ ವರ್ತಿಸಿದನು. ರಾಕ್ಷಸನು ಅವನನ್ನು ಸಮಾಧಾನಪಡಿಸಿ ಪ್ರಕೃತ ತಮಗೆ ಒಳ್ಳೆಯ ಮುಹೂರ್ತ ನೋಡಿ, ಹೇಳುವಂತೆ ಕೇಳಿದನು. ಕ್ಷಪಣಕನು ಯೋಚಿಸಿ ' ಅಮಾತ್ಯರೆ, ಈ ದಿವಸ ಮಧ್ಯಾಹ್ನಾತ್ಪರದಲ್ಲಿ ಸಕಲಗುಣಯುಕ್ತವಾದ ತಿಥಿಯು ಬರುವುದು. ಉತ್ತರದಿಂದ ದಕ್ಷಿಣಕ್ಕೆ ಹೋಗಲಿಚ್ಛಿಸಿರುವ ನಿಮಗೆ ನಕ್ಷತ್ರವು ಎಡಭಾಗಕ್ಕೆ ಆಗುತ್ತದೆ. ಬಲು ಒಳ್ಳೆಯ ಲಗ್ನ. ತೆರಳಬಹುದು. ' ಎಂದು ಸೂಚಿಸಿದನು. ರಾಕ್ಷಸನು ಹಿಂದೆ ಆದುದನ್ನು ಸ್ಮರಿಸಿಕೊಂಡು ' ಕ್ಷಪಣಕನೆ, ಮೊದಲು ನಂದರ ವಿಜಯಯಾತ್ರೆಗೆ ಲಗ್ನವನ್ನು ಹೇಳಿದಂತೆ ಈಗಲೂ ಹೇಳಬೇಡ. ಬೇರೆ ಜೋಯಿಸರೊಡನೆ ಯೋಚಿಸಿ ಸರಿಯಾದ ಮುಹೂರ್ತ ತಿಳಿಸು. ' ಎಂದು ಕೇಳಿದನು. ಅಷ್ಟಕ್ಕೇ ಕ್ಷಪಣಕನು ಕೋಪಿಸಿಕೊಂಡವನಂತೆ ' ಅಮಾತ್ಯರೆ, ನನ್ನ ಮಾತಿನಲ್ಲಿ ನಿಮಗೆ ನಂಬಿಕೆಯಿಲ್ಲದಿದ್ದರೆ ಬೇರೆ ಯಾರಿಂದಲಾದರೂ ನಿಶ್ಚಯಿಸಿಕೊಳ್ಳಿ ' ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಹೋದನು.

ರಾಕ್ಷಸನ ಬಳಿಯಲ್ಲಿ ಆಶ್ರಯಹೊಂದಿ ಆಪ್ತನಂತೆ ಇದ್ದ ಸಿದ್ಧಾರ್ಥಕನು ಇನ್ನು ವಿಳಂಬಮಾಡದೆ ಚಾಣಕ್ಯನು ತನಗೆ ತಿಳಿಸಿದ ರೀತಿಯಲ್ಲಿ ನಡೆದುಕೊಂಡು ಕಾರ್ಯಸಾಧನೆಮಾಡಬೇಕೆಂದು ಭಾವಿಸಿ ರಹಸ್ಯವಾಗಿ ಬಾಗುರಾಯಣನನ್ನು ಕಂಡನು. ಅವನು ಹೇಳಿದುದನ್ನು ಏಕಾಂತದಲ್ಲಿ ಭದ್ರಭಟಾದಿಗಳಿಗೆ ತಿಳಿಸಿ ರಾಕ್ಷಸನ ಭವನಕ್ಕೆ ಬಂದು ಶಕಟದಾಸನನ್ನು ಕಂಡನು.

" ಮಿತ್ರ, ನನ್ನ ಮಾವನಮನೆ ಇಲ್ಲಿಗೆ ಸಮೀಪದಲ್ಲಿದೆ. ನಾನು ಸ್ವದೇಶವನ್ನು ತ್ಯಜಿಸಿ ಬಂದುದರಿಂದ ನನ್ನ ಹೆಂಡತಿ ತೌರು ಮನೆಗೆ ಬಂದಿರುವಳಂತೆ. ಅವಳನ್ನು ನೋಡಿಕೊಂಡು ಬರಲು ಹೊರಟಿದ್ದೇನೆ. ಅಮಾತ್ಯರು ನನಗೆ ಬಹುಮಾನವಾಗಿ ಕೊಟ್ಟ ಭೂಷಣಗಳನ್ನು ತೆಗೆದುಕೊಂಡುಹೋಗಿ ಅವರಿಗೆ ಕೊಟ್ಟು ಸಮಾಧಾನಪಡಿಸಿ ಬರುವೆನು. " ಎಂದು ಹೇಳಿದನು. ಶಕಟದಾಸನು ಅದಕ್ಕೆಸಮ್ಮತಿಸಿ ಸೀಲುಮಾಡಿಟ್ಟಿದ್ದ ಆಭರಣದಪೆಟ್ಟಿಗೆಯನ್ನುಸಿದ್ಧಾರ್ಥಕನಿಗೆ

ಕೊಟ್ಟನು. ಅವನು ಅದನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಚಾಣಕ್ಯನು ಏಕಾಂತದಲ್ಲಿ ಹೇಳಿಕಳುಹಿಸಿದ್ದ ಮೇರೆಗೆ ಎಲ್ಲವನ್ನೂ ಜ್ಞಾಪಿಸಿಕೊಂಡು ಅವರು ಶಕಟದಾಸನಿಂದ ಬರೆಸಿಕೊಟ್ಟಿದ್ದ ಕಾಗದವನ್ನೂ ತೆಗೆದುಕೊಂಡು ಉಕ್ಕಡದ ಮಾರ್ಗವಾಗಿ ಬರುತ್ತಿದ್ದನು. ಸಿದ್ಧಾರ್ಥಕನು ಹೇಳಿದ್ದಂತೆ ಬಾಗುರಾಯಣನು ಉಂಡಿಗೆಯನ್ನು ಕೊಡುವ ಅಧಿಕಾರವನ್ನು ತಾನೇ ವಹಿಸಿಕೊಂಡಿದ್ದನು.

ಸಿದ್ಧಾರ್ಥಕನು ಬರುತ್ತಿರುವಾಗ ಕ್ಷಪಣಕನು ಎದುರಾದನು. ಪರಸ್ಪರ ವಿಚಾರ ವಿನಿಮಯಮಾಡಿಕೊಂಡರು. ಬಳಿಕ 'ಇಂದು ಮೊದಲುಗೊಂಡು ಪಾಟಲೀಪುರದ ಮಾರ್ಗವಾಗಿ ಹೋಗುವ ಜನರು ಬಾಗುರಾಯಣನಿಂದ ಉಂಡಿಗೆಯನ್ನು ಪಡೆದು ಅದನ್ನು ಉಕ್ಕಡದವರಿಗೆ ತೋರಿಸಿದಲ್ಲದೆ ಮುಂದೆ ಹೋಗಕೂಡದೆಂದು ರಾಜಾಜ್ಞೆಯಾಗಿದೆ. ರಾತ್ರೀವೇಳೆಯಲ್ಲಂತೂ ಇನ್ನೂ ಕಷ್ಟ. ನೀನು ರಾತ್ರೀಕಾಲದಲ್ಲೇ ಉಕ್ಕಡದವರಿಗೆ ಸಿಕ್ಕಿ ಅವರಿಂದ ಬಂಧಿಸಲ್ಪಟ್ಟು ಮಲಯಕೇತುವಿನ ಮುಂದೆ ನಿಲ್ಲಬೇಕಾದರೆ ಉಂಡಿಗೆಯನ್ನು ಪಡೆಯದೆ ಹೋಗಬೇಕು. ಇನ್ನು ಕಾರ್ಯಸಿದ್ಧಿಸುವ ಸಮಯ ದೂರವಾಗಿಲ್ಲ. ನಾನು ಬಾಗುರಾಯಣನ ಬಳಿಗೆ ಹೋಗಿ ಅಲ್ಲಿ ಮಾಡಬೇಕಾಗಿರುವ ಕೆಲಸದಲ್ಲಿ ನಿರತನಾಗಿರುವೆನು.' ಹೀಗೆಂದು ಕ್ಷಪಣಕನು ಸಿದ್ಧಾರ್ಥಕನಿಗೆ ತಿಳಿಸಿ ತೆಳಿರದನು.

ಬಾಗುರಾಯಣನು—ಆಚಾರ್ಯ ಚಾಣಕ್ಯರ ನೀತಿಪ್ರಯೋಗವು ವಿಚಿತ್ರವಾದ ದೈವವಿಲಾಸದಂತೆ ಅಗಾಧವಾದುದು. ಸೇನೆಯು ಪಾಟಲೀಪುರದ ಕಡೆಗೆ ಹೊರಟಿರುವಾಗ ನಾನು ಸಂಶಯಕ್ಕೆ ಆಸ್ಪದವಿಲ್ಲದಹಾಗೆ ಮಲಯಕೇತುವಿನ ಬಳಿ ಇರುವುದೇ ಒಳ್ಳೆಯದು. ಈಗಾಗಲೆ ಮಲಯಕೇತುವಿಗೆ ರಾಕ್ಷಸನ ಮೇಲೆ ಸಂಶಯವುಂಟಾಗುವಂತೆ ಮಾಡಿದ್ದೇನೆ. ಮುಂದಿನ ಕೆಲಸ ಬೇಗನೆ ಸಾಧನೆಯಾಗಬೇಕಾಗಿದೆ—ಎಂದು ಯೋಚಿಸಿ ದೂತರಿಗೆ ಉಕ್ಕಡದಿಂದ ಹೊರಗೆ ಹೋಗಲು ಉಂಡಿಗೆಯನ್ನು ಕೇಳಬಂದವರನ್ನು ತನ್ನಲ್ಲಿಗೆ ಕರೆತರುವಂತೆ ಆಜ್ಞೆಮಾಡಿದನು. ಸ್ವಲ್ಪ ಹೊತ್ತಿನಲ್ಲಿ ರಾಜಭಟರು ಉಂಡಿಗೆಗಾಗಿ ಕಾದಿರುವ ಕ್ಷಪಣಕನನ್ನು ಕರೆತಂದರು. ಅವನನ್ನು ನೋಡಿ ಚಾಣಕ್ಯನ ಸ್ನೇಹಿತನಾದ ಇಂದುಶರ್ಮನೆಂಬುದನ್ನು ತಿಳಿದು ಅವನನ್ನು ಗೌರವದಿಂದ ಕಂಡು ಮುಂದಿನ ಕಾರ್ಯವನ್ನು ಅವನೊಡನೆ ಆಲೋಚಿಸಿದನು.

ಆ ಸಮಯದಲ್ಲಿ ಮಲಯಕೇತುವು ತನಗೆ ರಾಕ್ಷಸನ ವಿಷಯದಲ್ಲಿ ಉಂಟಾಗಿರುವ ಸಂಶಯವನ್ನು ಕುರಿತು ಪರ್ಯಾಲೋಚಿಸಲು ಉಂಡಿಗೆಯ ಚಾವಡಿಯಲ್ಲಿದ್ದ ಬಾಗುರಾಯಣನ ಬಳಿಗೆ ಬರುತ್ತಿದ್ದನು. ಆಗ ಪಂಜರ ದಲ್ಲಿದ್ದ ಗಿಳಿಯು 'ಚಿಕ್ಕದೊರೆಗೆ ಜಯವಾಗಲಿ, ಚಿಕ್ಕದೊರೆಗೆ ವಿಜಯವಾಗಲಿ' ಎಂದು ಕೂಗಲು ಬಾಗುರಾಯಣನು ಮಲಯಕೇತುವು ತನ್ನೆಡೆಗೆ ಬರುತ್ತಿರುವ ಸಂಗತಿಯನ್ನು ಗೊತ್ತುಮಾಡಿಕೊಂಡನು. ಜೀವಸಿದ್ಧಿಯನ್ನು ಕೆಣಕಿದಂತೆ ಮಾಡಿ ಇವನ ಮೂಲಕ ರಾಜಕುಮಾರನಿಗೆ ಅಮಾತ್ಯನ ಮೇಲೆ ಕೋಪ ವುಂಟಾಗುವಂತೆ ಮಾಡಲು ಇದೇ ಸಮಯವೆಂದು ನಿಶ್ಚಯಿಸಿದನು. ಮಲಯ ಕೇತುವು ಅವರಿಗೆ ಕಾಣಿಸಿಕೊಳ್ಳದೆ ತೆರೆಯ ಹಿಂದೆಯೇ ಮರೆಯಲ್ಲಿ ನಿಂತು ಅವರು ಏನು ಮಾತನಾಡಿಕೊಳ್ಳುವರೆಂಬುದನ್ನು ಆಲಿಸುತ್ತಿದ್ದನು.

"ಕ್ಷಪಣಕರೆ, ತಾವು ಅಮಾತ್ಯರಾಕ್ಷಸನ ಕಾರ್ಯಾರ್ಥವಾಗಿ ಹೋಗಲು ಉಂಡಿಗೆಯನ್ನು ಕೇಳಲು ಬಂದವರಲ್ಲವಷ್ಟೆ?"

ಬುದ್ಧೇಶ! ಬುದ್ಧೇಶ! ಎಂದು ಕ್ಷಪಣಕನು ಕಿವಿಗಳನ್ನು ಮುಚ್ಚುತ್ತ "ಬಾಗುರಾಯಣನೆ, ವಂಚಕನಾದ ರಾಕ್ಷಸನ ಕಾರ್ಯ ನಮಗೇಕೆ ಬೇಕು? ಅವನ ಹೆಸರೂ ಕೂಡ ಯಾವ ದೇಶದಲ್ಲಿ ಕೇಳಿಬರುವುದಿಲ್ಲವೋ ಅಲ್ಲಿಗೆ ಹೋಗುವೆನು. ಉಂಡಿಗೆಯನ್ನು ಕೊಡು."

"ನಿಮಗೆ ಪರಮ ಮಿತ್ರನಾದ ಅಮಾತ್ಯನಲ್ಲಿ ಹೀಗೆ ಜಿಗುಪ್ಸೆಯಿಂದ ಮಾತನಾಡಲು ಆತನಿಂದ ನಡೆದ ಅಂಥ ಅಪರಾಧವೇನು?"

"ಅದು ಹೇಳತಕ್ಕ ವಿಷಯವಲ್ಲ. ನಾನು ಮಾಡಿಕೊಂಡ ತಪ್ಪಿಗೆ ಲಜ್ಜೆಪಟ್ಟು ಹೀಗೆ ನಿರ್ಭಾಗ್ಯನಾದೆನು."

"ಅದು ಅಂಥ ರಹಸ್ಯ ವಿಚಾರವೆ?"

"ರಹಸ್ಯವಲ್ಲದಿದ್ದರೂ ಮಹಾಘಾತುಕ ವ್ಯಾಪಾರವಾದುದರಿಂದ ಲಜ್ಜೆ ಪಡಬೇಕಾಯಿತು."

"ಕ್ಷಣಪಕರೆ, ಅಂಥ ಹೇಳಬಾರದ ರಹಸ್ಯವಿರುವುದಾದರೆ ಉಂಡಿಗೆ ಯನ್ನು ಕೇಳಬೇಕಾಗಿಲ್ಲ. ನಿಮಗೆ ಉಂಡಿಗೆ ಬೇಕಾಗಿದ್ದಲ್ಲಿ ನಡೆದ ಸಂಗತಿ ತಿಳಿಸಿ."

''ಅಷ್ಟು ಕುತೂಹಲವಿದ್ದರೆ ಹೇಳದೆ ಇಲ್ಲ. ನಾನು ರಾಕ್ಷಸನಿಗೆ ಬಹಳ ಆಪ್ತನಾಗಿದ್ದುದು ನಿಜ. ಅವನು ನಂದರ ಸಂಹಾರಕ್ಕೆ ಕಾರಣನಾದನೆಂಬ ವೈರವನ್ನೆಣಿಸಿ, ವಿಷಕನ್ಯೆಯನ್ನು ನನ್ನ ಮೂಲಕ ಕಳುಹಿಸಿ ಆಕೆಯ ದೆಸೆ ಯಿಂದ ಪರ್ವತರಾಜನನ್ನು ಮರಣಕ್ಕೆ ಗುರಿಮಾಡಿದನು. ಚಾಣಕ್ಯನು ನನ್ನನ್ನು ರಾಕ್ಷಸನ ಮಿತ್ರನಾಗಿದ್ದು ಅಕಾರ್ಯ ಮಾಡಿದನೆಂದು ಅಪಮಾನ ಪೂರ್ವಕವಾಗಿ ಪಟ್ಟಣದಲ್ಲೆಲ್ಲಾ ಸಾರಿಸಿ ಪಾಟಲೀಪುರದಿಂದ ಹೊರಡಿಸಿದನು. ನನಗೆ ಮತ್ತೆಲ್ಲಿಯೂ ಆಶ್ರಯ ಸಿಕ್ಕದೆ ಇಲ್ಲಿಗೆ ಬಂದು ಮತ್ತೆ ರಾಕ್ಷಸನ ಆಶ್ರಯ ದಲ್ಲೇ ನಿಲ್ಲಬೇಕಾಯಿತು. ಇಲ್ಲಿಯೂ ಆ ಅಮಾತ್ಯನು ಕೆಲವು ಜನ ಅರಸ ರೊಡನೆ ಸೇರಿಕೊಂಡು ಚಂದ್ರಗುಪ್ತನಲ್ಲಿ ವಿಶ್ವಾಸ ಬೆಳೆಸಿ ಈಗಲೂ ಮಹಾ ಘಾತುಕ ವ್ಯಾಪಾರ ಮಾಡಲೆಣಿಸಿದ್ದಾನೆ. ಆದಕಾರಣ ಅವನ ಸಹವಾಸ ದೋಷದಿಂದ ನನಗೆ ಮತ್ತೆಲ್ಲಿ ಅನಿಷ್ಟ ಸಂಭವಿಸಿ ನಾನು ಈ ಲೋಕದಲ್ಲೇ ಇರದಂತಾಗುವುದೋ ಎಂದು ಯೋಚಿಸಿ ದೇಶಾಂತರ ಹೋಗಬೇಕೆಂದು ಉಂಡಿಗೆಯನ್ನು ಕೇಳಲು ಬಂದೆ. ಇದನ್ನು ಹೇಳಲು ನಾಚಿ ಸುಮ್ಮನಿದ್ದೆನು''

''ಹಾಗಾದರೆ ಜೀವಿಸಿದ್ದರೆ ಅರ್ಧರಾಜ್ಯಕೊಡಬೇಕಾಗುವುದೆಂಬ ಲೋಭ ಬುದ್ಧಿಯಿಂದ ಚಾಣಕ್ಯನು ವಿಷಕನ್ಯಾ ಮೂಲಕವಾಗಿ ಪರ್ವತರಾಜನನ್ನು ಕೊಲ್ಲಿಸಿದನೆಂಬ ವಾರ್ತೆ ಸಟೆಯಾಯಿತಷ್ಟೆ ?"

"ಬುದ್ಧೀಶ ಸಾಕ್ಷಿಯಾಗಿಯೂ ಚಾಣಕ್ಯನಿಗೆ ಇದೊಂದೂ ತಿಳಿಯದು. ಅನ್ಯಾಯವಾಗಿ ಒಬ್ಬರ ಮೇಲೆ ಅಪವಾದವನ್ನು ಹೊರಿಸುವುದು ಸಾಧುವಲ್ಲ."

''ಹಾಗಾದರೆ ಈ ವಿಷಯನ್ನು ರಾಜಪುತ್ರ ಮಲಯಕೇತುವಿನ ಮುಂದೆ ಹೇಳಬಹುದಲ್ಲ.''

''ರಾಕ್ಷಸನಿಗೆ ಮಿತ್ರನಾಗಿದ್ದು ಈ ವೇಳೆಯಲ್ಲಿ ಶತ್ರುಭಾವವನ್ನಾಚರಿಸು ವುದು ಸರಿಯಲ್ಲ."

ಮರೆಯಲ್ಲಿ ನಿಂತು ಅವರ ಸಂಭಾಷಣೆಯನ್ನು ಕೇಳುತ್ತಿದ್ದ ಮಲಯ ಕೇತುವು ತನ್ನ ತಂದೆಯನ್ನು ಜ್ಞಾಪಿಸಿಕೊಂಡು ದುಃಖಿತನಾಗಿ ರಾಕ್ಷಸನ ವಿಷಯದಲ್ಲಿ ವಿಶೇಷ ಆಗ್ರಹಹೊಂದಿದವನಾಗಿ ಬಾಗುರಾಯಣನಿಗೆ ಕಾಣಿಸಿ ಕೊಂಡು 'ಈಗ ಎಲ್ಲಾ ವಿಚಾರವೂ ಅರ್ಥವಾಯಿತು. ಅಮಾತ್ಯನ ಕಪಟವು ಗೊತ್ತಾಯಿತು. ನಮ್ಮ ತಂದೆಗೆ ಮಿತ್ರನೆಂದು ಇವನಿಗೆ ಸರ್ವಾಧಿಕಾರವನ್ನು

ಕೊಟ್ಟು ನಂಬಿಕೆಯಿಂದ ಇದ್ದೆನು. ಈತನು ಹೀಗೆ ಗೂಢಶತ್ರುತ್ವವನ್ನಾಚರಿಸಿ ಬಂದು ನಮಗೆಲ್ಲಾ ಇಂಥ ವ್ಯಸನವನ್ನುಂಟುಮಾಡಿದನು. ಇವನು ನಮಗೆ ಪ್ರತ್ಯಕ್ಷ ರಾಕ್ಷಸನೇ ಸರಿ.' ಎಂದು ಹೇಳಿ, ಒಂದು ಕಡೆ ವ್ಯಸನ ಮತ್ತೊಂದು ಕಡೆ ತಡೆಯಲಾರದಷ್ಟು ಕೋಪ, ಇವೆರಡರಿಂದ ಕದಡಿ ಮನಸ್ಸುಳ್ಳವನಾದನು.

ಅದನ್ನು ಕಂಡು ಬಾಗುರಾಯಣನು—ನಮ್ಮ ಸಂವಾದವನ್ನು ಹೊಂಚಿ ಕೇಳಿದ ಮಲಯಕೇತುವಿಗೆ ಈಗ ರಾಕ್ಷಸನಲ್ಲಿ ಅತ್ಯಾಗ್ರಹವುಂಟಾಗಿದೆ. ಈ ಸಮಯದಲ್ಲಿ ಈತನನ್ನು ನಾನು ಸಮಾಧಾನಪಡಿಸದೇ ಹೋದರೆ ರಾಕ್ಷಸನ ಪ್ರಾಣಕ್ಕೆ ಅಪಾಯ ಸಂಭವಿಸಿದರೂ ಅದೇನು ಹೆಚ್ಚಲ್ಲ. ಹಾಗಾಗಕೂಡದು. ಚಾಣಕ್ಯರು ಸೂಚಿಸಿರುವಂತೆ ಇವರಿಬ್ಬರಿಗೂ ವಿಶ್ವಾಸ ತಪ್ಪುವಂತೆ ಮಾಡಿ ರಾಕ್ಷಸನನ್ನು ಇಲ್ಲಿಂದ ಇನ್ನು ಹೊರಡಿಸುವ ಸನ್ನಾಹಮಾಡಬೇಕು—ಎಂದು ಯೋಚಿಸಿ 'ರಾಜಕುಮಾರ, ಕಳೆದುಹೋದ ಕಾರ್ಯಕ್ಕೆ ಕಳವಳಿಸಿ ಫಲವಿಲ್ಲ. ಗೌಡದೇಶವು ಕೈವಶವಾಗಲಿರುವ ಈ ಸಮಯದಲ್ಲಿ ರಾಕ್ಷಸನಲ್ಲಿ ವಿರೋಧ ಮಾಡಿಕೊಂಡರೆ ಕಾರ್ಯಹಾನಿಯಾಗುವುದು. ನಂದರಾಜ್ಯವು ಕೈವಶವಾದ ಮೇಲೆ ಬೇಕಾದರೆ ರಾಕ್ಷಸನನ್ನು ಪುರಸ್ಕರಿಸಬಹುದು. ಬೇಡವಾದರೆ ಪರಿತ್ಯಜಿಸಬಹುದು.' ಎಂದು ಮಲಯಕೇತುವಿಗೆ ಸಮಾಧಾನ ಹೇಳಿದನು.

ಮಾರನೆಯ ದಿವಸ ರಾತ್ರಿವೇಳೆಯಲ್ಲಿ ಸಿದ್ಧಾರ್ಥಕನು ಬೇಕಾಗಿಯೇ ಉಕ್ಕಡದ ಸಮೀಪಕ್ಕೆ ಬಂದು ಭಯಗೊಂಡವನಂತೆ ಹಿಂದೆ ಮುಂದೆ ನೋಡುತ್ತ ಉಕ್ಕಡವನ್ನು ಮೀರಿಹೋಗುವವನಂತೆ ಪ್ರಯತ್ನ ಮಾಡುತ್ತಿದ್ದನು. ಕಾವಲುಗಾರರು ಅವನನ್ನು ಹಿಡಿದು ಅವನ ಬಳಿ ಕಾಗದವಿರುವುದನ್ನು ಕಂಡು ಅವನನ್ನು ಬಾಗುರಾಯಣನ ಬಳಿಗೆ ಕರೆತಂದರು. ಆ ವೇಳೆಯಲ್ಲಿ ಬಾಗುರಾಯಣನೂ ಮಲಯಕೇತುವೂ ವಿನೋದ ಸಂಭಾಷಣೆಯಲ್ಲಿದ್ದರು. ಈ ಸಿದ್ಧಾರ್ಥಕನು ಬೇಕಾಗಿಯೇ ಉಕ್ಕಡದ ಕಾವಲುಗಾರರಿಗೆ ಸಿಕ್ಕಿ ಇಲ್ಲಿಗೆ ಬಂದಿರುವನಾದುದರಿಂದ ರಾಕ್ಷಸನನ್ನು ಇಲ್ಲಿಂದ ಹೊರಡಿಸಲು ಕಾಲ ಒದಗಿತೆಂದು ಬಾಗುರಾಯಣನು ಭಾವಿಸಿ ಸಿದ್ಧಾರ್ಥಕನನ್ನು ಮಲಯಕೇತುವಿನ ಎದುರಿನಲ್ಲಿಯೇ ಪ್ರಶ್ನಿಸಿದನು.

"ನೀನು ಇಲ್ಲಿಗೆ ಹೊಸದಾಗಿ ಬಂದವನೋ ಅಥವಾ ಇಲ್ಲಿರುವ ಅಧಿಕಾರಿಗಳ ಭೃತ್ಯವರ್ಗಕ್ಕೆ ಸೇರಿದವನೋ ?"

"ಸ್ವಾಮಿ, ನಾನು ಅಮಾತ್ಯರಾಕ್ಷಸರ ಸೇವಕನು."

"ಹಾಗಾದರೆ ನನ್ನಿಂದ ಉಂಡಿಗೆಯನ್ನು ಏಕೆ ಪಡೆಯಲಿಲ್ಲ. ಯಾರೇ ಆಗಲಿ ಈ ಸಮಯದಲ್ಲಿ ಉಂಡಿಗೆಯನ್ನು ಪಡೆಯದೆ ಉಕ್ಕಡದಿಂದ ಹೊರಗೆ ಹೋಗಕೂಡದೆಂಬ ರಾಜಾಜ್ಞೆಯು ನಿನಗೆ ತಿಳಿಯದೋ?"

"ಅಷ್ಟು ತ್ವರಿತಕಾರ್ಯವಿರುವುದರಿಂದ ತಮ್ಮಿಂದ ಉಂಡಿಗೆ ಪಡೆಯದೆ ಹೋಗುತ್ತಿದ್ದೆನು."

"ಎಲೋ, ರಾಜಶಾಸನವನ್ನೂ ಮೀರಿಹೋಗುವಂಥ ಕಾರ್ಯವೇನಿತ್ತು?"

ಆಗ ಮಲಯಕೇತುವು ಆತನ ಬಳಿಯಿದ್ದ ಕಾಗದದ ವಿಚಾರವೇನು ನೋಡೆಂದು ಬಾಗುರಾಯಣನಿಗೆ ಹೇಳಿದನು. ಬಾಗುರಾಯಣನು ಆ ಪತ್ರವನ್ನು ತೆಗೆದುಕೊಂಡು ಚೆನ್ನಾಗಿ ನೋಡಿ 'ರಾಜಕುಮಾರ, ಈ ಕಾಗದವು ರಾಕ್ಷಸನ ಮುದ್ರೆಯುಂಗುರದ ಮೊಹರಿನಿಂದ ಕೂಡಿದೆ.' ಎಂದು ಹೇಳಲು ಮಲಯಕೇತುವು ಆಶ್ಚರ್ಯದಿಂದ ಮುದ್ರೆಕೆಡದಂತೆ ಕಾಗದದ ಒಕ್ಕಣೆಯನ್ನು ಓದುವಂತೆ ಹೇಳಿದನು.

'ಶ್ರೀಮತು ಸ್ಥಳದಲ್ಲಿರುವ ಒಬ್ಬ ಶ್ರೇಷ್ಠರಿಗಾಗಿ ಸ್ಥಳಾಂತರದಲ್ಲಿರುವ ಒಬ್ಬ ಪುರುಷನು ವಿಜ್ಞಾಪಿಸಿಕೊಳ್ಳುವುದೇನೆಂದರೆ, ನಮಗೆ ಪ್ರತಿಪಕ್ಷದವನಾದ ಮನುಷ್ಯನನ್ನು ನಿರಾಕರಿಸಿ ಆತನು ಕೇಳುವಂತೆ ನನ್ನ ಗುಣಕಥನವನ್ನು ಮಾಡಿದುದು ಪರೋಕ್ಷವಾಗಿ ಶ್ರುತವಾಯಿತು. ವಿಶ್ವಾಸದಿಂದ ಕಳುಹಿಸಿದ ಅಮೂಲ್ಯಾಭರಣಗಳೂ ತಲುಪಿದುವು. ಇದರಿಂದ ನನಗೆ ಬಹಳ ಸಂತೋಷ ವುಂಟಾಗಿದೆ. ಇಲ್ಲಿ ನಮಗೆ ಆಪ್ತರಾಗಿ ನಮ್ಮ ಕೆಲಸಕ್ಕೆ ಸಹಾಯ ಮಾಡು ವವರಿಗೆ ಕಾರ್ಯವಾದಮೇಲೆ ತಕ್ಕಂತೆ ಗೌರವಿಸಬೇಕಾಗುವುದು. ಕೆಲವರು ಶತ್ರುವಿನ ಭಂಡಾರವನ್ನು ಅಪೇಕ್ಷಿಸುವರು. ಕೆಲವರಿಗೆ ರಾಜ್ಯದ ಮೇಲೆ ಆಸೆಯಿದೆ. ಕೆಲವರು ಸೇನೆಯನ್ನು ಬಯಸುವರು. ಇದು ತಮ್ಮ ಮನಸ್ಸಿನಲ್ಲಿರ ಬೇಕು. ಈ ಪತ್ರದ ಸಂಗಡ ರಾಜಯೋಗ್ಯವಾದ ದಿವ್ಯವಿಭೂಷಣಗಳನ್ನು ಕಳುಹಿಸಿದ್ದೇನೆ. ಇದರಿಂದ ಇಲ್ಲಿ ನನಗೆ ಸರ್ವಸ್ವಾತಂತ್ರ್ಯವುಂಟೆಂಬುದು ತಮ್ಮ ಚಿತ್ತಕ್ಕೆ ವೇದ್ಯವಾಗಬಹುದು. ಉಳಿದ ಸಂಗತಿ ಆಪ್ತನಾದ ಈ ಪುರುಷನ ಮೂಲಕ ತಿಳಿಯಬಹುದು."

ಕಾಗದವನ್ನು ಓದಿ ಬಳಿಕ ಬಾಗುರಾಯಣನು ಚಾರನನ್ನು 'ಈ

ಕಾಗದವನ್ನು ನಿನಗೆ ಯಾರು ಕೊಟ್ಟರು ? ನಿನ್ನಲ್ಲಿರುವ ಒಡವೆಗಳನ್ನು ತೋರಿಸು' ಎಂದು ಹೇಳಲು ಅವನು ಸರಿಯಾಗಿ ಉತ್ತರ ಕೊಡಲಿಲ್ಲ. ಅವನು ನಿಜಹೇಳುವವರೆಗೂ ಕಶಾಪ್ರಹಾರಮಾಡಿ ಹಿಂಸಿಸಿರೆಂದು ದೂತರಿಗೆ ಆಜ್ಞಾಪಿಸಿದನು. ಸಿದ್ಧಾರ್ಥಕನು ಕಶೆಯಪೆಟ್ಟಿಗೆ ತಾಳದವನಂತೆ ನಡುಗುತ್ತ ತನ್ನ ಕಂಕುಳಲ್ಲಿ ಸೇರಿಸಿಕೊಂಡಿದ್ದ ಪೆಟ್ಟಿಗೆಯನ್ನು ಕೆಡವಿದನು. ಅದನ್ನು ದೂತರು ಭಾಗುರಾಯಣನ ವಶಕ್ಕೆ ಒಪ್ಪಿಸಿದರು. ಭಾಗುರಾಯಣನು ಅದನ್ನು ನೋಡಿ ಆ ಪೆಟ್ಟಿಗೆಗೂ ಕಾಗದಕ್ಕೂ ಮಾಡಿರುವ ಮುದ್ರೆ ಒಂದೇ ಆಗಿದೆಯೆಂದು ಮಲಯಕೇತುವಿಗೆ ತಿಳಿಸಿದನು. ಮುದ್ರೆ ಹಾಳಾಗದಂತೆ ಉಪಾಯದಿಂದ ಪೆಟ್ಟಿಗೆಯನ್ನು ತೆಗೆಸಿ ನೋಡಲು ಅದರಲ್ಲಿ ಆಭರಣಗಳಿದ್ದುವು. ಅವನ್ನು ನೋಡಿ ಮಲಯಕೇತುವು 'ಅಮಾತ್ಯನು ಮೊದಲು ನಮ್ಮಾಶ್ರಯ ಪಡೆಯಲು ಬಂದಾಗ ಆತನು ಅಲಂಕರಿಸಿಕೊಳ್ಳಲು ಕೊಟ್ಟ ವಿಭೂಷಣಗಳಿವು. ಯೋಚಿಸಿ ನೋಡಿದರೆ ಅಮಾತ್ಯನು ಇವು ರಾಜರು ಧರಿಸಲು ಯೋಗ್ಯವೆಂದು ಚಂದ್ರಗುಪ್ತನಲ್ಲಿ ಅಧಿಕಾರವನ್ನು ಬಯಸಿ, ಚಾಣಕ್ಯನಿಲ್ಲದ ಸಮಯದಲ್ಲಿ ಈ ಕಾಗದದ ಸಂಗಡ ಇವುಗಳನ್ನು ಕಳುಹಿಸಿರಬೇಕೆಂದು ತೋರುವುದು. ಅಮಾತ್ಯನ ಹೃದಯ ಈಗ ತಿಳಿಯಿತು. ಇಂಥ ವಂಚಕರನ್ನು ನಂಬುವುದು ಹೇಗೆ ? ನಮ್ಮಾಶ್ರಯದಲ್ಲೇ ಇದ್ದು ನಮ್ಮ ಉಪ್ಪುತಿಂದು ನಮಗೇ ದ್ರೋಹ ಬಗೆಯುತ್ತಿರುವ ಇಂತಹ ಕೃತಘ್ನರಿಗೆ ಏನು ಮಾಡಿದರೂ ತೀರದು.' ಎಂದು ಭಾಗುರಾಯಣನಿಗೆ ಹೇಳಿದನು.

ಭಾಗುರಾಯಣನು ಇನ್ನೂ ಹೆಚ್ಚಿನ ಸಂಗತಿ ಮಲಯಕೇತುವಿಗೆ ಗೊತ್ತಾದರೆ ಅನುಕೂಲವೆಂದು ಯೋಚಿಸಿ ಆ ಚಾರನಿಗೆ ಮತ್ತೆ ಕಶಾಪ್ರಹಾರ ಮಾಡುವಂತೆ ಹೇಳಿದನು. ಸಿದ್ಧಾರ್ಥಕನು ನೆಲದಲ್ಲಿ ಬಿದ್ದು ಭೀತನಂತೆ ಕೈಮುಗಿದು 'ಸ್ವಾಮಿ, ನನ್ನನ್ನು ಏನೂ ಮಾಡುವುದಿಲ್ಲವೆಂದು ನನಗೆ ಅಭಯಕೊಟ್ಟರೆ ಸತ್ಯಾಂಶ ಹೇಳಿಬಿಡುತ್ತೇನೆ.' ಎಂದು ಬೇಡಿಕೊಳ್ಳಲು ಭಾಗುರಾಯಣನು 'ನೀನು ಚಾಚೂ ತಪ್ಪದೆ ನಿಜಾಂಶ ಹೇಳಿದರೆ ನಿನ್ನನ್ನು ಕ್ಷಮಿಸಲಾಗುವುದು.' ಎಂದು ಭರವಸೆಯಿತ್ತನು.

"ಸ್ವಾಮಿ ಅಮಾತ್ಯರಾಕ್ಷಸನು ಈ ಪೆಟ್ಟಿಗೆಯನ್ನೂ ಈ ಕಾಗದವನ್ನೂ ಪಾಟಲೀಪುರದ ಚಂದ್ರಗುಪ್ತ ಮಹಾರಾಜರಿಗೆ ಗುಟ್ಟಾಗಿ ಅರ್ಪಿಸಿಬರುವಂತೆ

ನನ್ನನ್ನು ಕಳುಹಿಸಿದರು. ನಾನು ಅಮಾತ್ಯರ ಆಪ್ತದೂತ." ಎಂದು ಚಾರನು ಹೇಳಿದನು.

"ಈ ಅರ್ಥವು ನಮಗೆ ಗೊತ್ತಾಗಿದೆ. ಅಮಾತ್ಯರು ಚಂದ್ರಗುಪ್ತನಿಗೆ ಯಾವ ಬಾಯಿಮಾತುಗಳನ್ನು ಹೇಳೆಂದು ತಿಳಿಸಿರುವರು." ಬಾಗುರಾಯಣನು ಪ್ರಶ್ನಿಸಿದನು.

"ಸ್ವಾಮಿ, ತಮಗೆ ಆಪ್ತರಾದ ಐದು ಮಂದಿ ಅರಸುಗಳ ಹೆಸರನ್ನು ತಿಳಿಸಿಬರುವಂತೆ ಅಮಾತ್ಯರು ಹೇಳಿರುವರು."

"ಅವರ ಹೆಸರುಗಳೇನು, ಹೇಳು."

"ಉಲೂಕಪತಿ ಚಿತ್ರವರ್ಮ, ಮಲಯಾಧಿಪತಿ ಸಿಂಹನಾದ, ಕಾಶ್ಮೀರಪತಿಯಾದ ಪುಷ್ಕರಾಕ್ಷ, ಸಿಂಧುಪಾಲನಾದ ಸಿಂಧುಷೇಣ, ಪಾರಶೀಕ ಭೂವಲ್ಲಭನಾದ ಮೇಘನಾದ, ಇವರೇ ಆ ಐವರು ಅರಸರು."

ಆ ದೂತನ ಮಾತನ್ನು ಕೇಳಿ ಮಲಯಕೇತುವು ಮನಸ್ಸಿನಲ್ಲಿ 'ಅಹಹ! ಸಾಮಂತರಾದ ಚಿತ್ರವರ್ಮಾದಿಗಳೂ ನಮಗೆ ದ್ರೋಹವೆಣಿಸಿ ರಾಕ್ಷಸನ ಕಾರ್ಯಕ್ಕೆ ಸಹಾಯಕರಾಗಿರುವರೆ? ಇವರೇ ಹೀಗಾದಮೇಲೆ ಇನ್ನಾರನ್ನು ಆಪ್ತರೆಂದು ನಂಬುವುದು? ನಮ್ಮ ತಂದೆಯವರು ಈ ದುಷ್ಟರನ್ನು ನಂಬಿ ರಕ್ಷಿಸಿದ್ದು ಹಾವಿಗೆ ಹಾಲೆರೆದು ಪೋಷಿಸಿದಂತಾಯಿತು.' ಎಂದು ವ್ಯಥೆಪಟ್ಟುಕೊಂಡನು. ಕಂಚುಕಿಯಾದ ಹಂಸಕನಿಗೆ ರಾಕ್ಷಸನನ್ನು ಕರೆತರುವಂತೆ ಹೇಳಿ ಕಳುಹಿಸಿದನು.

ಆಗ ಅಮಾತ್ಯರಾಕ್ಷಸನು ಯುದ್ಧಕಾರ್ಯಾಸಕ್ತನಾಗಿದ್ದನು. ರಾಜಕುಮಾರನ ಕರೆಬರಲು ಏನು ವಿಶೇಷವೋ ಬೇಗನೆ ತಿಳಿಯಬೇಕೆಂದು ಅವನ ಮನಸ್ಸು ಕಾತರಿಸಿತು. ಶಕಟದಾಸನನ್ನು ಕರೆದು 'ಈಗ ರಾಜಾಸ್ಥಾನಕ್ಕೆ ಹೋಗಬೇಕಾಗಿದೆ. ಭೂಷಣರಹಿತನಾಗಿ ಹೋಗುವುದು ಗೌರವವಲ್ಲ. ರಾಜಕುಮಾರನು ನನಗೆ ಧರಿಸಲು ಕೊಟ್ಟಿದ್ದ ಆಭರಣಗಳನ್ನು ನಿನ್ನ ಪ್ರಾಣವನ್ನುಳಿಸಿದ ಸಿದ್ಧಾರ್ಥಕನಿಗೆ ಪಾರಿತೋಷಕವಾಗಿ ಕೊಡಲಾಯಿತು. ಆದುದರಿಂದ ಈಗ ನಾವು ವರ್ತಕರಿಂದ ಕ್ರಯಕ್ಕೆ ಪಡೆದ ವಿಭೂಷಣಗಳನ್ನು ತೆಗೆದು

ಕೊಂಡು ಬಾ.' ಎಂದು ಹೇಳಿ ಅವುಗಳನ್ನು ತರಿಸಿ ಧರಿಸಿಕೊಂಡು ಮಲಯ ಕೇತುವಿನ ಬಳಿಗೆ ಹೋದನು.

ಬಾಗುರಾಯಣನು--ರಾಕ್ಷಸನು ಬಂದಾಗ ಸಿದ್ಧಾರ್ಥಕನು ಎದುರಿಗಿದ್ದರೆ ಪುನಃ ಈಗ ನಡೆದುದನ್ನೆಲ್ಲಾ ಅವನ ಎದುರಿನಲ್ಲಿ ಹೇಳಿಸಬೇಕಾಗುವುದು. ಮೊದಲಿನಂತೆ ಇವನು ಕಪಟವಾಕ್ಯಗಳನ್ನು ಹೇಳಲು ಪ್ರಾರಂಭಿಸಿದರೆ ಅಮಾತ್ಯನು ಇದೆಲ್ಲಾ ಚಾಣಕ್ಯನ ತಂತ್ರವೆಂದು ಮಲಯಕೇತುವು ನಂಬುವಂತೆ ಹೇಳಿ ನಮ್ಮ ಕಾರ್ಯಕ್ಕೆ ವಿಘ್ನ ತಂದರೂ ತರಬಹುದು. ಒಂದು ವೇಳೆ ಮಲಯ ಕೇತುವಿಗೆ ರಾಕ್ಷಸನ ಮಾತಿನಲ್ಲಿ ನಂಬಿಕೆ ತೋರಿಬಂದರೆ ಪಾಟಲೀಪುರದಿಂದ ಬಂದವರೆಲ್ಲರೂ ಚಾಣಕ್ಯನಿಂದ ಪ್ರೇರಿತರಾಗಿ ಬಂದವರೆಂದು ನಿಶ್ಚಯಿಸಿ ನಮ್ಮೆಲ್ಲರನ್ನೂ ಶಿಕ್ಷೆಗೆ ಗುರಿಪಡಿಸಬಹುದು. ಅದರಿಂದ ಸಿದ್ಧಾರ್ಥಕನನ್ನು ಮರೆಯಲ್ಲಿರಿಸಬೇಕು--ಎಂದು ಆಲೋಚಿಸಿ ರಾಜಪುತ್ರನಿಗೆ 'ಈ ಚಾರನು ರಾಕ್ಷಸನು ಬಂದಾಗ ಮರೆಯಲ್ಲಿರುವುದೇ ಒಳ್ಳೆಯದು.' ಎಂದು ಹೇಳಿ ಅವನ ಅಪ್ಪಣೆ ಪ್ರಕಾರ ಸಿದ್ಧಾರ್ಥಕನನ್ನು ಹೊರಗೆ ಕಳುಹಿಸಿದನು.

## ದೋಷಾರೋಪಣೆ

ರಾಕ್ಷಸನು ಬೇಗನೆ ಬಂದು ಮಲಯಕೇತುವನ್ನು ಕಂಡು ಆತುರದಿಂದ ಕರೆಸಿದ ಕಾರ್ಯಗೌರವವೇನೆಂಬುದನ್ನು ಪ್ರಶ್ನಿಸಿದನು. ಮಲಯಕೇತುವಿಗೆ ಸಹನೆ ಮೀರಿತ್ತು. ಆದರೂ ಪ್ರಕಟಗೊಳಿಸದೆ "ಅಮಾತ್ಯರೆ, ಈಗ ಪಾಟಲೀ ಪುರಕ್ಕೆ ಯಾರಾದರೂ ಹೋಗತಕ್ಕವರುಂಟೋ ?"

"ರಾಜಪುತ್ರ, ಈಗ ನಾವೇ ಸೇನಾಪರಿವೃತರಾಗಿ ತೆರಳುವವರಾಗಿದ್ದೇವಲ್ಲವೆ ?"

"ಹಾಗಾದರೆ ಈ ಕಾಗದವು ಯಾರದು ? ಈ ಮುದ್ರೆ ಯಾರದು ? ಈ ಪತ್ರದ ಅಭಿಪ್ರಾಯವೇನು ? ನೀವೇ ನೋಡಬಹುದು," ಎಂದು ಹೇಳಿ ಪತ್ರವನ್ನು ರಾಕ್ಷಸನಿಗೆ ಕೊಟ್ಟನು.

ರಾಕ್ಷಸನು ಅದನ್ನು ಓದಿಕೊಂಡು 'ಇದು ಶತ್ರುಗಳ ಕಪಟ ಲೇಖನ. ಈ ಮುದ್ರೆಯೂ ಅಂಥದೇ. ಇದನ್ನು ಸತ್ಯವೆಂದು ತಾವು ನಂಬಬಾರದು. ರಾಕ್ಷಸನು ಅಂಥ ಕೃತಘ್ನನಲ್ಲ.' ಎಂದು ಹೇಳಿದನು.

ಮಲಯಕೇತುವು—ಹಾಗಾದರೆ ಈ ಪೆಟ್ಟಿಗೆ ಯಾರದು ? — ಎಂದು ಅದನ್ನೂ ರಾಕ್ಷಸನ ಮುಂದಿಟ್ಟನು.

ರಾಕ್ಷಸನು ಪೆಟ್ಟಿಗೆಯಲ್ಲಿದ್ದ ಒಡವೆಗಳನ್ನು ನೋಡಿ ಗಾಬರಿಗೊಂಡವನಾಗಿ ಈ ಭೂಷಣಗಳನ್ನು ರಾಜಪುತ್ರನು ನನಗೆ ನಾನು ಬಂದಾಗ ಕೊಟ್ಟಿದ್ದನು. ನಾನು ಸಿದ್ಧಾರ್ಥಕನಿಗೆ ಕೊಟ್ಟಿದ್ದುಂಟು. ಈಗ ಇವು ಇಲ್ಲಿಗೆ ಬರಲು ಕಾರಣವೇನು ? ಈ ಕಾಗದವನ್ನು ನೋಡಿದರೆ ಚಂದ್ರಗುಪ್ತನು ನನಗೆ ಮೊದಲು ವಿಭೂಷಣಗಳನ್ನು ಕಳುಹಿಸಿದ ಹಾಗೂ ಅದಕ್ಕೆ ಪ್ರತಿಯಾಗಿ ಅವನಿಗೆ ಈ ಆಭರಣಗಳನ್ನು ದೂತನ ಮೂಲಕ ಕಳುಹಿಸಿ ಅವನಿಂದ ನಾನು ಅಧಿಕಾರವನ್ನು ಬಯಸಿರುವ ಹಾಗೂ ಇಲ್ಲಿನ ಐವರು ಸಾಮಂತರೂ ನಾನೂ ಮಲಯಕೇತುವನ್ನು ಸೆರೆಹಿಡಿದು ಚಂದ್ರಗುಪ್ತನಿಗೆ ಒಪ್ಪಿಸಿಕೊಡುವಂತೆಯೂ ಅರ್ಥಗ್ರಹಣವಾಗುವಂತೆ ಇದೆ. ಈ ಮೋಸವು ಚಾಣಕ್ಯನಿಂದಲ್ಲದೆ ಮತ್ತೊಬ ನಿಂದ ನಡೆದಿರಲಾರದು. ಇದರಿಂದ ಇಲ್ಲಿನ ಇದು ಮಂದಿ ಅರಸುಗಳಿಗೂ ನನಗೂ ವಿಪತ್ತು ಸಂಭವಿಸುವಂತಿದೆ. ' ಎಂದು ಚಿಂತಿಸುತ್ತಿದ್ದನು.

ಮಲಯಕೇತುವು—ಅಮಾತ್ಯರೆ, ಈ ಒಡವೆಗಳನ್ನು ನೋಡಿ ಏಕೆ ಸುಮ್ಮನಾದಿರಿ. ಇವು ನಾನು ನಿಮಗೆ ಧರಿಸಲು ಕೊಟ್ಟವುಗಳಲ್ಲವೆ ?—ಎಂದು ಪ್ರಶ್ನೆಮಾಡಿದನು

"ಹೌದು ; ಇವು ತಾವು ಕೊಟ್ಟ ಒಡವೆಗಳೇ. ಇವುಗಳನ್ನು ನಾನು ಒಂದು ಸಂತೋಷಕಾರ್ಯಾರ್ಥವಾಗಿ ಒಬ್ಬ ದೂತನಿಗೆ ಕೊಟ್ಟೆನು." ಎಂದು ಅಮಾತ್ಯನು ಉತ್ತರವಿತ್ತನು.

ಬಾಗುರಾಯಣನು 'ಅಮಾತ್ಯರೆ, ರಾಜಯೋಗ್ಯವಾದ ಆಭರಣಗಳನ್ನು ದೂತರಿಗೆ ದಾನಮಾಡುವುದು ಉಚಿತವೆ ?' ಎಂದು ಹೇಳಲು ರಾಕ್ಷಸನು ಆ ಮಾತಿಗೆ ಉತ್ತರ ಹೇಳದೆ ಸುಮ್ಮನಿದ್ದನು.

ಬಳಿಕ ಮಲಯಕೇತುವು—ಈ ಲೇಖನವು ನಿಮ್ಮ ರಾಯಸದ ಶಕಟ ದಾಸನದಲ್ಲವೋ ?—ಎಂದು ಮತ್ತೆ ರಾಕ್ಷಸನನ್ನು ಕೇಳಿದನು.

" ಈ ಲೇಖನವು ಶಕಟದಾಸನದಲ್ಲ. ನಾನು ಅವನಿಗೆ ಹೇಳಿ ಇದನ್ನು ಬರೆಯಿಸಲೂ ಇಲ್ಲ. ಇದೆಲ್ಲಾ ಚಾಣಕ್ಯನ ತಂತ್ರವಲ್ಲದೆ ಬೇರೆಯಲ್ಲ. "ಎಂದು

ರಾಕ್ಷಸನು ಎಷ್ಟು ಹೇಳಿದರೂ ಮಲಯಕೇತುವಿಗೆ ಅವನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ.

ಆಗ ಮಲಯಕೇತುವು ಶಕಟದಾಸನ ಹಸ್ತಾಕ್ಷರದ ಬೇರೆ ಪತ್ರವನ್ನು ತರಿಸಿ ಅಲ್ಲಿದ್ದ ಪತ್ರದ ಅಕ್ಷರಗಳೊಡನೆ ಹೋಲಿಸಿ ನೋಡಲು ಆ ಎರಡು ಪತ್ರಗಳ ಲೇಖನಗಳೂ ಒಬ್ಬರದೇ ಎಂಬುದರಲ್ಲಿ ಸಂಶಯ ತೋರಲಿಲ್ಲ. ರಾಕ್ಷಸನು ತಾನು ಮಾಡಿದ ತಪ್ಪನ್ನು ಮುಚ್ಚಿಕೊಳ್ಳಲು ಏನೇನೋ ಸುಳ್ಳು ಹೇಳುತ್ತಿರುವನೆಂದು ನಿರ್ಧರಿಸಿದನು.

ಮಲಯಕೇತುವು ಕೋಪದಿಂದ ರಾಕ್ಷಸನ ಮುಖವನ್ನು ನೋಡಲು ಆತನು ಧರಿಸಿದ್ದ ಆಭರಣಗಳು ಅವನ ದೃಷ್ಟಿಗೆ ಬಿದ್ದುವು. ಅವು ಅವನ ತಂದೆ ಧರಿಸುತ್ತಿದ್ದ ಆಭರಣಗಳಾಗಿದ್ದುವು. ಪಕ್ಕದಲ್ಲಿದ್ದ ಕಂಚುಕಿಯನ್ನು ಪ್ರಶ್ನಿಸಲು ಅವನೂ ' ನಾನು ಈ ಆಭರಣಗಳನ್ನು ಚೆನ್ನಾಗಿ ಬಲ್ಲೆ. ಹಿರಿಯ ಮಹಾಸ್ವಾಮಿಗಳು ಧರಿಸುತ್ತಿದ್ದವುಗಳು ಇವಲ್ಲದೆ ಬೇರೆಯಲ್ಲ ' ಎಂದು ತಿಳಿಸಿದನು. ರಾಕ್ಷಸನನ್ನು ಕುರಿತು ' ನಮ್ಮ ತಂದೆಯುವರು ಧರಿಸುತ್ತಿದ್ದ ಈ ಒಡವೆಗಳು ಎಲ್ಲಿಂದ ಬಂದವು ' ಎಂದು ಕೇಳಲು ರಾಕ್ಷಸನು ಅವುಗಳನ್ನು ವರ್ತಕರಿಂದ ಕ್ರಯಕ್ಕೆ ಪಡೆಯಲಾಯಿತೆಂದು ತಿಳಿಸಿದನು. ಮಲಯಕೇತುವಿಗೆ ರಾಕ್ಷಸನ ಮೇಲಿದ್ದ ಸಂಶಯ ಸ್ಥಿರಪಟ್ಟಿತು.

ರಾಕ್ಷಸನು–ನಾನು ಧರಿಸಿರುವ ಆಭರಣಗಳು ಪರ್ವತರಾಜನದೇ ಎಂದು ನಿಶ್ಚಯವಾದ ಮೇಲೆ ಇವರು ನನ್ನಲ್ಲಿ ಯಾವ ಆರೋಪವನ್ನು ಮಾಡಿದರೂ ನೋಡಿದವರಿಗೆ ನಿಜವಿರಬೇಕೆಂದೇ ತೋರುವುದು. ನನ್ನ ಹಗೆಯಾದ ಚಾಣಕ್ಯನು ಈ ಭೂಷಣಗಳನ್ನು ವರ್ತಕರ ಮೂಲಕ ನನಗೆ ತಲಪುವಂತೆ ತಂತ್ರಮಾಡಿರಬೇಕು. ವಿಧಿಯು ನನಗೆ ಪ್ರತಿಕೂಲವಾಗಿರುವಾಗ ಇಂಥ ಘಟನೆಗಳು ನಡೆಯುವುದು ಅಸಂಭವವಲ್ಲ—ಎಂದು ತನ್ನ ವಿಧಿಯನ್ನು ನೆನೆದು ಚಿಂತಿಸುತ್ತಿದ್ದನು.

ಮಲಯಕೇತುವು ಆಗ ನಡೆದ ಸಂಗತಿಗಳೆಲ್ಲಾ ನಿಜವೆಂದೇ ನಂಬಿದನು. ಇಷ್ಟಕ್ಕೆಲ್ಲಾ ರಾಕ್ಷಸನೇ ಕಾರಣನೆಂದು ಅವನನ್ನು ಅಲ್ಲಿಯೇ ಸೀಳಿಬಿಡುವಷ್ಟು ಅವನಿಗೆಕೋಪವುಂಟಾಯಿತು. 'ಎಲೈ ಪ್ರತ್ಯಕ್ಷರಾಕ್ಷಸನೆ, ಅಕಾರಣವಾಗಿ ವಿಷಕನ್ಯಾ ಮುಖದಿಂದ ನನ್ನ ತಂದೆಯನ್ನು ಕೊಲ್ಲಿಸಿದೆ. ಈಗ ನನ್ನನ್ನು ವೈರಿಯಾದ

ಚಂದ್ರಗುಪ್ತನಿಗೆ ಒಪ್ಪಿಸಬೇಕೆಂದಿರುವೆ. ನಂಬಿದವರಿಗೆ ದ್ರೋಹ ಬಗೆಯುವ ಇದಕ್ಕಿಂತ ನೀಚಕಾರ್ಯ ಮತ್ತಾವುದಿದೆ.' ಎಂದು ಮೂದಲಿಸಲು, ಅಮಾತ್ಯನು ಶಿವಶಿವ ! ಎಂದು ಕಿವಿಗಳನ್ನು ಮುಚ್ಚಿಕೊಳ್ಳುತ್ತ 'ನಾನು ಸತ್ಯವಾಗಿಯೂ ಪರ್ವತರಾಜನನ್ನು ಕೊಲ್ಲಿಸಿ ಘಾತುಕನಲ್ಲ' ಎಂದು ಉತ್ತರ ಕೊಟ್ಟನು. ಹಾಗಾದರೆ ಮತ್ತಾರೆಂದು ರಾಜಕುಮಾರನು ಪ್ರಶ್ನಿಸಲು ರಾಕ್ಷಸನು ದೈವವನ್ನು ಕೇಳಬೇಕೆಂದನು. 'ದೈವವನ್ನು ಕೇಳಬೇಕೋ ? ಜೀವಸಿದ್ಧಿಯೆಂಬ ಕ್ಷಪಣಕ ನನ್ನು ಕೇಳಬೇಡವೋ ?' ಎಂದು ಮಲಯಕೇತುವು ರಾಕ್ಷಸನನ್ನು ಅವಹೇಳನ ಮಾಡಿ ನುಡಿದನು.

ಮಲಯಕೇತುವಿನ ಆಕ್ಷೇಪಣೆಯನ್ನು ಕೇಳಿ ರಾಕ್ಷಸನು—ಆಹಾ ! ಕ್ಷಪಣಕನೂ ಚಾಣಕ್ಯನ ಗೂಢಚಾರನಾದಮೇಲೆ ಶತ್ರುಗಳು ನನ್ನ ಹೃದಯ ವನ್ನೂ ಸಹ ಆಕ್ರಮಿಸಿದ ಹಾಗೆ ಆಯಿತು. ಇನ್ನು ಮನುಷ್ಯ ಪ್ರಯತ್ನ ಸಾಗುವುದುಂಟೆ—ಎಂದು ಚಿಂತಿಸಿದನು

ಮಲಯಕೇತುವಿನ ಆಜ್ಞೆಯಂತೆ ಶೇಖರ ಸೇನಾಪತಿಯು ರಾಜದ್ರೋಹಿ ಗಳೆಂಬ ಕಾರಣದಿಂದ ಚಿತ್ರವರ್ಮ, ಸಿಂಹನಾದ, ಪುಷ್ಕರಾಕ್ಷ-ಈ ಮೂವರನ್ನೂ ಸಂಹರಿಸಿ, ಸಿಂಧುಷೇಣ, ಮೇಘನಾದರನ್ನು ಆನೆಯ ಕಾಲಿಗೆ ಕಟ್ಟಿ ಎಳೆಸಿ ಕೊಲ್ಲಿಸಿದನು. ಅವರ ಸೇನೆಗಳು ಹೆದರಿ ದಿಕ್ಕಾಪಾಲಾಗಿ ಓಡಿದುವು. ಉಳಿದ ಸಾಮಂತರೂ ತಮಗೇನು ಕಾದಿದೆಯೋ ಎಂದು ಭಾವಿಸಿ ಹೇಳದೆ ಕೇಳದೆ ಸ್ವದೇಶವನ್ನು ಕುರಿತು ತೆರಳುತ್ತಿದ್ದರು. ಶೇಖರನು ಚಿತ್ರವರ್ಮಾದಿಗಳ ವಸ್ತುವಾಹನಗಳನ್ನು ರಾಜಭಂಡಾರಕ್ಕೆ ಸೇರಿಸಲು ರಾಜಾಜ್ಞೆಯಂತೆ ಬಲ ಸಮೇತನಾಗಿ ಹೋಗುತ್ತಿದ್ದನು.

ಆಗ ಮಲಯಕೇತುವು 'ರಾಕ್ಷಸ, ನಿನ್ನ ಸ್ನೇಹವನ್ನು ಬೆಳೆಸಿದ್ದಕ್ಕೆ ಚಿತ್ರವರ್ಮಾದಿಗಳು ಜೀವವನ್ನರ್ಪಿಸಿದರು. ನಾನು ನಿನ್ನಂತೆ ವಿಶ್ವಾಸ ಘಾತುಕನಲ್ಲ. ನೀನಾದರೆ ಬ್ರಾಹ್ಮಣನು. ನಿನ್ನನ್ನು ಕೊಂದು ಬರುವ ಬ್ರಹ್ಮ ಹತ್ಯಾದೋಷವನ್ನು ನಾನೆಲ್ಲಿ ಕಳೆದುಕೊಳ್ಳಲಿ. ಅದಕ್ಕಾಗಿ ನಿನ್ನನ್ನು ಪ್ರಾಣ ಸಹಿತ ಉಳಿಸಿ ಕಳುಹಿಸಿರುವೆನು. ಇನ್ನು ಇಲ್ಲಿಂದ ತೊಲಗು. ಆ ಚಂದ್ರ ಗುಪ್ತನನ್ನೇ ಆಶ್ರಯಿಸು ಹೋಗು' ಎಂದು ಕಠೋರವಾಗಿ ನುಡಿದನು.

ಬಾಗುರಾಯಣನು ಅಮಾತ್ಯರ ಭೃತ್ಯನಿಗೆ ಏನಪ್ಪಣೆಯೆಂದು ಕೇಳಲು 'ದೂತನನ್ನು ಶಿಕ್ಷಿಸಬಾರದು. ಈವನು ಯಥಾರ್ಥವನ್ನು ಹೇಳಿರುವನು.

ಸ್ವಾಮಿಭೃತ್ಯರಿಬ್ಬರನ್ನೂ ಜೊತೆಗೊಳಿಸಿ ನಮ್ಮ ದೇಶವನ್ನು ಬಿಟ್ಟು ಹೊರಡುವಂತೆ ಮಾಡು' ಎಂದು ಹೇಳಿ ಮಲಯಕೇತುವು ಶಯನಗೃಹಕ್ಕೆ ತೆರಳಿದನು.

ಆಗ ರಾಕ್ಷಸನು—ನನ್ನ ಭೃತ್ಯನ್ಯಾರೋ? ಯಾರು ಈ ಕೆಲಸ ಮಾಡಿದರೋ? ಒಂದೂ ತಿಳಿಯದಲ್ಲ-ಎಂದು ಚಿಂತಾಕ್ರಾಂತನಾಗಿರುವಾಗ ಬಾಗುರಾಯಣನು ಸಿದ್ಧಾರ್ಥಕನನ್ನು ಕರೆತರಿಸಿ "ಎಲೈ ಭೃತ್ಯನೆ, ನಿಮ್ಮ ಅಮಾತ್ಯರ ಸಂಗಡ ನಿನ್ನನ್ನು ಕಳುಹಿಸುವಂತೆ ರಾಜಾಜ್ಞೆಯಾಗಿದೆ. ಹೋಗಬಹುದು.'ಎಂದು ಹೇಳಿದನು. ಸಿದ್ಧಾರ್ಥಕನು ಬಂದು ರಾಕ್ಷಸನಿಗೆ ಅಡ್ಡಬಿದ್ದು ಲಜ್ಜಿತನಂತೆ ತಲೆತಗ್ಗಿಸಿ ನಿಂತುಕೊಂಡನು. ರಾಕ್ಷಸನು—ಇವನಿಂದಲೇ ಈ ಅನರ್ಥವೆಲ್ಲವೂ ನಡೆದಿದ್ದೀತೆಂದು ನಿಶ್ಚಯಿಸಿ ಅವನನ್ನು ಪ್ರಶ್ನೆಮಾಡಿದನು.

"ಎಲಾ, ನೀನು ಯಾರಿಗೆ ಭೃತ್ಯನು?"

"ಸ್ವಾಮಿ, ತಮ್ಮ ಅಪ್ಪಣೆಯಂತೆ ಹೋಗುತ್ತಿರುವಾಗ ನನ್ನ ಉಪಾಯಗಳೊಂದೂ ಸಾಗಲಿಲ್ಲ." ಸಿದ್ಧಾರ್ಥಕನು ಹೇಳಿದನು.

"ನಿನಗೇನು ಅಪ್ಪಣೆ ಕೊಟ್ಟಿದ್ದೆವು?"

"ಸ್ವಾಮಿ, ಕಾಗದವು ಯಾರಿಗೂ ಸಿಕ್ಕದಂತೆ ಮರೆಸಿ ಇಟ್ಟುಕೊಂಡಿದ್ದೆ"

"ಯಾವ ಕಾಗದ? ಯಾರು ನಿನಗೆ ಕೊಟ್ಟವರು?"

"ನಾನೇನು ಮಾಡಲಿ ಸ್ವಾಮಿ, ದೂತರು ಬಹಳವಾಗಿ ಹೊಡೆದುದರಿಂದ ಕಂಕುಳಲ್ಲಿ ಮರೆಸಿಕೊಂಡಿದ್ದ ಪೆಟ್ಟಿಗೆಯು ಕೆಳಗೆ ಬಿದ್ದು ಅವರ ಕೈಗೆ ಸಿಕ್ಕಿತು."

"ಎಲೈ, ಪೆಟ್ಟಿಗೆ ಯಾವುದು?"

"ಆಭರಣಗಳಿದ್ದುದು."

"ಆಭರಣಗಳೆಂದರೇನು? ಯಾವ ಆಭರಣಗಳು?"

"ಪೂಜ್ಯರೆ, ಮೊಹರು ಸಹಿತವಾಗಿಯೇ ತಲುಪಿಸೆಂದು ಅಪ್ಪಣೆಯಾಗಿತ್ತಷ್ಟೆ?"

"ಎಲಾ ದ್ರೋಹಿ, ಯಾರು ನಿನಗೆ ಮೊಹರು ಮಾಡಿಕೊಟ್ಟರು?"

"ನಾನು ಯಾವುದನ್ನೂ ಬೇಕಾಗಿ ಹೇಳಿದವನಲ್ಲ. ಅಪ್ಪಣೆಯ ಮೇರೆಗೆ ಶಕಟದಾಸನು ಮುದ್ರೆಯನ್ನು ಮಾಡಿದನು."

"ಎಲಾ ಪಾಪಿ, ಶಕಟದಾಸನು ಮೊಹರು ಮಾಡಿದುದು ನಿಜವೆ?"

"ಸ್ವಾಮಿ, ತಮ್ಮ ಪಾದಸಾಕ್ಷಿಯಾಗಿಯೂ ಆ ರಹಸ್ಯಗಳೊಂದನ್ನೂ

ನಾನು ಬಾಯಿಬಿಟ್ಟವನಲ್ಲ. ಅದೆಲ್ಲವನ್ನೂ ಕ್ಷಪಣಕನೇ ಹೇಳಿಬಿಟ್ಟನು."

"ದುರಾತ್ಮ, ಆ ಕ್ಷಪಣಕನು ಯಾರು ?"

"ಏಕೆ ಸ್ವಾಮಿ, ಒಂದನ್ನೂ ಅರಿಯದವರಂತೆ ಮಾತನಾಡುವಿರಿ. ಮೊದಲು ವಿಷಕನ್ಯೆಯನ್ನು ತಮ್ಮ ಅಪ್ಪಣೆಯ ಮೇರೆಗೆ ಪರ್ವತರಾಜನ ಬಳಿಗೆ ಕರೆದುಕೊಂಡು ಹೋದ ಜೀವಸಿದ್ಧಿಯಲ್ಲವೆ ಆ ಕ್ಷಪಣಕನು ?"

ಅದನ್ನೆಲ್ಲಾ ಕೇಳಿ ರಾಕ್ಷಸನು—ಶಿವಶಿವ! ಈ ದುರಾತ್ಮನು ಮದ್ಯಪಾಯಿಯಂತೆ ಹುಚ್ಚಾಗಿ ಏನೇನೋ ಬೊಗಳುವನಲ್ಲ. ಇವನೊಡನೆ ಮಾತನಾಡಿದುದೇ ಹೆಡ್ಡತನ—ಎಂದು ಬೇರೆ ಕಡೆಗೆ ತಿರುಗಿ ಮನಸ್ಸಿನಲ್ಲಿ 'ಈ ಸಿದ್ಧಾರ್ಥಕ ಕ್ಷಪಣಕರುಗಳು ಶತ್ರುಪಕ್ಷದವರಾದುದರಿಂದ ನನಗೆ ಈ ದುರ್ದೆಶೆಯುಂಟಾಯಿತು.' ಎಂದು ಯೋಚಿಸುತ್ತಿರುವಾಗ ಬಾಗುರಾಯಣನು 'ಅಮಾತ್ಯರೆ, ಸಮಯಕ್ಕಾಗುವನೆಂದು ಇಂಥಹವನನ್ನು ವೃಥಾ ನಿಮ್ಮ ಭೃತ್ಯನನ್ನಾಗಿ ಭಾವಿಸಿದಿರಿ.' ಎಂದು ನುಡಿದನು.

'ಹೌದು ಬಾಗುರಾಯಣ, ಶತ್ರುಗ್ರಸ್ತನಾಗಿದ್ದ ಮಲಯಕೇತುವನ್ನು ಈ ರಾಜ್ಯಕ್ಕೆ ಕರೆತಂದು ನೀನು ಆತನಿಗೆ ಆಪ್ತನಾಗಿರುವಂತೆ ಈ ಸಿದ್ಧಾರ್ಥಕನು ಶಕಟದಾಸನನ್ನು ಇಲ್ಲಿಗೆ ಕರೆತಂದು ನನಗೆ ಆಪ್ತನಂತೆ ಇದ್ದುದರಿಂದ ನನಗೆ ಈ ಫಲ ದೊರೆಯಿತು.' ಎಂದು ಹೇಳಿ ಖಿನ್ನನಾಗಿ ತೆರಳಿದನು.

## ಅಭ್ಯಾಸ

ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಷಯದ ಹೆಗ್ಗುರುತುಗಳನ್ನು ಉಪಯೋಗಿಸಿಕೊಂಡು ಉತ್ತಮ ಪ್ರಬಂಧ ಬರೆಯಿರಿ.

೧. **ಕಪಟ ಕಲಹ**

1. ಕೌಮುದೀ ಮಹೋತ್ಸವ. 2. ಚಾಣಕ್ಯನ ಅಡಚಣೆ.

3. ಕೃತಕ ಕಲಹ. 4. ಕಲಹದ ಉದ್ದಿಶ್ಯ.

೨. **ಮಿತ್ರಭೇದ**

1. ಮಂತ್ರಾಲೋಚನೆ. 2. ಕ್ಷಪಣಕನ ಕಪಟೋಕ್ತಿ.

3. ಸಿದ್ಧಾರ್ಥಕನ ಕೃತ್ರಿಮ. 4. ಮಲಯಕೇತುವಿನ ಆಗ್ರಹ.

ಅಮಾತ್ಯರಾಕ್ಷಸನನ್ನು ಮಲಯಕೇತುವಿನಿಂದ ಬೇರ್ಪಡಿಸುವುದರಲ್ಲಿ **'ಸಿದ್ಧಾರ್ಥಕನ ಪಾತ್ರ'** ಎಂಬ ವಿಷಯವಾಗಿ ಒಂದು ಲೇಖನ ಬರೆಯಿರಿ.

## ಪ್ರಕರಣ ೬

[ಪಾಟಲೀಪುರಾಭಿಮುಖವಾಗಿ. ವಸಂತವನದಲ್ಲಿ. ಸಮಾಗಮ. ಪಟ್ಟಾಭಿಷೇಕ. ಧರ್ಮೋಪದೇಶ.]

ರಾತ್ರಿಯ ಕಡೆಯ ಜಾವ. ಶುಭ್ರವಾದ ಆಗಸದಲ್ಲಿ ಸುಧಾಕರನು ಮಿರುಗುವ ತಾರಾಗಣದೊಡನೆ ಬೆಳಗುತ್ತಿದ್ದನು. ಬೆಳದಿಂಗಳು ಆಹ್ಲಾದಕರವಾಗಿದ್ದಿತು. ದೂರದಿಂದ ಕೇಳಿಬರುತ್ತಿದ್ದ ಚಕ್ರವಾಕಪಕ್ಷಿಗಳ ಸಂತಸದ ಧ್ವನಿಯೊಂದನ್ನುಳಿದರೆ ಎಲ್ಲೆಲ್ಲೂ ನೀರವ. ಪ್ರಶಾಂತ ವಾತಾವರಣ. ಬಿರಿವ ಕುಸುಮಗಳ ನವಸೌರಭಭಾರವನ್ನು ತಳೆಯಲು ತಂಗಾಳಿ ತವಕಿಸುತ್ತಿತ್ತು. ಜಗತ್ತು ಸುಖನಿದ್ರೆಯಿಂದ ಇನ್ನೂ ಎಚ್ಚೆತ್ತಿಲ್ಲ. ಅಂಥ ಶಾಂತಸಮಯದಲ್ಲಿ ಮಲಯಕೇತುವಿನಿಂದ ತಿರಸ್ಕರಿಸಲ್ಪಟ್ಟು ಇರುಳೆಲ್ಲಾ ನಾನಾಯೋಚನೆಗೊಳಗಾಗಿ ಖಿನ್ನನಾಗಿದ್ದ ಅಮಾತ್ಯರಾಕ್ಷಸನು ಶಾಹುರೀನಗರವನ್ನು ತ್ಯಜಿಸಿ ಏಕಾಕಿಯಾಗಿ ಹೊರಟನು. ದಾರಿಯು ಬೇಗಬೇಗನೆ ಸಾಗುತ್ತಿತ್ತು. ಅರುಣೋದಯದ ಹೊತ್ತಿಗೆ ಗಿರಿತರಂಗಿಣಿಯೊಂದರ ಬಳಿಗೆ ಬಂದಿದ್ದನು. ಬಂಡೆಯ ಮೇಲುರುಳಿ ಜುಳಜುಳನೆ ಹರಿವ ತಿಳಿಜಲವನ್ನು ಕಂಡು ಅವನ ಮನಸ್ಸು ಹರ್ಷಗೊಂಡಿತು. ಸುತ್ತಮುತ್ತಲಿದ್ದ ಪ್ರಕೃತಿಸೌಂದರ್ಯವನ್ನು ಕಂಡು ಬೆರಗಾದನು.

ಆ ಹೊಳೆಯಲ್ಲಿ ಮಿಂದು ಸೂರ್ಯನಮಸ್ಕಾರಾದಿ ನಿತ್ಯವಿಧಿಯನ್ನು ಮುಗಿಸಿ ಬಳಿಯ ಬಂಡೆಯೊಂದರ ಮೇಲೆ ಕುಳಿತನು. ಬಾಲಸೂರ್ಯನ ಸುವರ್ಣಕಿರಣಗಳು ಪ್ರಕೃತಿಯ ಮೇಲೆ ಹೊಸ ಸೌಂದರ್ಯದ ಬೆಳಕನ್ನುಂಟುಮಾಡುತ್ತಿದ್ದುವು. ಆಗ ಆತನು ತನ್ನಲ್ಲಿ—ದೈವವು ನನಗೆ ಪ್ರತಿಕೂಲವಾದುದರಿಂದ ನನ್ನ ಸಾಹಸವೆಲ್ಲಾ ವ್ಯರ್ಥವಾಯಿತು. ಆಪ್ತರೆಂದು ನಂಬಿದವರೇ ಅಹಿತರಾದರು. ಆ ಚಾಣಕ್ಯನ ತಂತ್ರದ ಮುಂದೆ ನನ್ನ ಮಂತ್ರವೇನೂ ಸಾಗುವಂತಿಲ್ಲ. ಮಲಯಕೇತುವಿನ ಆಶ್ರಯವೂ ತಪ್ಪಿತು. ಇಂಥ ಕಡೆಯೇ ನನಗೆ ಹೀಗಾದುದನ್ನು ನೋಡಿದರೆ ಮುಂದೆ ಯಾರನ್ನು ಆಶ್ರಯಿಸಲೂ ಮನಸ್ಸು ಒಡಂಬಡುವುದಿಲ್ಲ. ಚಂದ್ರಗುಪ್ತನ ಮೇಲೆ ನಾನೇ ಖಡ್ಗಸಮೇತನಾಗಿ ಹೋಗೋಣವೆಂದರೆ

ಅದು ಹೇಗೆ ಪರಿಣಮಿಸುವುದೋ ? ನಾನೊಬ್ಬನೇ ಏನುಮಾಡಬಲ್ಲೆ ? ಪ್ರಾಣ ತ್ಯಾಗಮಾಡಿಕೊಳ್ಳೋಣವೆಂದರೆ ಆತ್ಮಹತ್ಯಾದೋಷ ಪ್ರಾಪ್ತವಾಗುವುದು. ಏನು ಮಾಡಲೂ ತೋಚುವುದಿಲ್ಲವಲ್ಲಾ ! ಹೇಗಾದರೂ ಆಗಲಿ ಈಗ ನನ್ನ ಹೆಂಡತಿ ಮಕ್ಕಳಿಗೋಸ್ಕರ ತನ್ನ ಪತ್ನೀಪುತ್ರರೊಡನೆ ಸೆರೆಯಲ್ಲಿ ಸಿಕ್ಕಿಬಿದ್ದಿರುವ ಪರಮ ಮಿತ್ರನಾದ ಚಂದನದಾಸನನ್ನು ಯಾವ ಉಪಾಯದಿಂದಲಾದರೂ ಬಿಡಿಸಲು ಪ್ರಯತ್ನಿಸುವೆನು. ಅದಕ್ಕಾಗಿ ಮತ್ತೆ ಪಾಟಲೀಪುರವನ್ನು ಪ್ರವೇಶಿಸುವೆನು—ಎಂದು ನಿಶ್ಚಯಿಸಿಕೊಂಡನು.

ಬಳಿಕ ಅಮಾತ್ಯನು ಪಾಟಲೀಪುರಾಭಿಮುಖವಾಗಿ ಪ್ರಯಾಣ ಬೆಳಸಿದನು. ಗಾಳಿ ಅನುಕೂಲವಾಗಿ ಬೀಸುತ್ತಿತ್ತು. ಮಾರ್ಗದಲ್ಲಿ ಎಳೆಬಿಸಿಲಿಗೆ ಮೈಯ್ಯೊಡ್ಡಿ ನಲಿವ ನವಿಲುಗಳು ಗೋಚರಿಸಿದುವು. ಚಿಮ್ಮಿ ನೆಗೆವ ಹರಿಣಗಳನ್ನು ಕಂಡನು. ಧಾನ್ಯಗಳನ್ನು ಕಚ್ಚಿ ಹಾರುವ ಪಕ್ಷಿಗಳನ್ನು ನೋಡಿದನು. ಇದ್ದಕ್ಕಿದ್ದಂತೆ ಅವನ ಬಲಗಣ್ಣು ಅದುರಿತು. ರಾಕ್ಷಸನು ಶುಭನಿಮಿತ್ತಗಳನ್ನು ಕಾಣುತ್ತ ಬರುತ್ತಿದ್ದನು. ಆದರೂ ಅವನಿಗೆ ಆಗ ಭವಿಷ್ಯಸುಖದ ಗಮನವೇ ಇರಲಿಲ್ಲ. ಬಲವಾದ ಚಿಂತೆ ಅವನನ್ನು ಆವರಿಸಿತ್ತು.

ಬಾಗುರಾಯಣನು ಅಮಾತ್ಯರಾಕ್ಷಸನು ಪಾಟಲೀಪುರಾಭಿಮುಖವಾಗಿ ತೆರಳಿದುದನ್ನು ತಿಳಿದು ತನ್ನ ಮನಸ್ಸಿನಲ್ಲಿ 'ಚಾಣಕ್ಯರು ತಿಳಿಸಿದ ರೀತಿಯಲ್ಲಿಯೇ ಕಾರ್ಯಗಳೆಲ್ಲಾ ನೆರವೇರಿದುವು. ಈಗ ಮಲಯಕೇತುವನ್ನು ಸೆರೆಹಿಡಿದು ಪಾಟಲೀಪುರಕ್ಕೆ ಕರೆದೊಯ್ಯುವುದು ಮಾತ್ರ ಉಳಿದಿದೆ,' ಎಂದು ಭಾವಿಸಿ ದೂತರನ್ನು ಕರೆದು ಅವರ ಮೂಲಕ ಭದ್ರಭಟಾದಿಗಳಿಗೆ ಹೀಗೆ ಕಳುಹಿಸಿದನು.

"ನೀವು ಮೃಗಗಳ ಬೇಟೆಯನ್ನಾಡಬೇಕೆಂದು ಸಂಕಲ್ಪಿಸಿರುವಿರಷ್ಟೆ ? ಈಗ ಅರುಣೋದಯ ಸಮಯವು ಹತ್ತಿರವಾಯಿತು. ನಿದ್ರೆಗೆಯ್ಯುತ್ತಿರುವ ಮೃಗವು ಎದ್ದು ಇತರ ಮೃಗಗಳ ಜೊತೆಗೂಡುವುದಕ್ಕೆ ಮುಂಚೆಯೇ ತಕ್ಕ ಸಾಮಗ್ರಿಗಳೊಡನೆ ಅದನ್ನು ಸುತ್ತುಗಟ್ಟಿ ಹಿಡಿಯುವುದೇ ಲೇಸು. ಇಲ್ಲದಿದ್ದರೆ ಆಮೇಲೆ ಹೆಚ್ಚು ಶ್ರಮಪಡಬೇಕಾಗುವುದು." ಈ ಒಕ್ಕಣೆಯ ಭಾವವನ್ನರಿತು ಭದ್ರಭಟಾದಿಗಳು ಮಲಯಕೇತುವನ್ನು ಕೈಸೆರೆ ಹಿಡಿಯಲುದ್ಯುಕ್ತರಾಗಿ ಹೊರಟರು. ಬಾಗುರಾಯಣನು ರಾಕ್ಷಸನು ಎಲ್ಲಿ ಹೋಗುವನು, ಎಲ್ಲಿ

ತಂಗುವನು, ಏನು ಮಾಡುವನು- ಇವೇ ಮೊದಲಾದ ವಿಷಯಗಳನ್ನು ತಿಳಿದು ಚಾಣಕ್ಯನಿಗೆ ವಿಜ್ಞಾಪಿಸುವಂತೆ ಸಿದ್ಧಾರ್ಥಕನಿಗೆ ತಿಳಿಸಿ ತಾನು ಅಶ್ವಾರೂಢ ನಾಗಿ ಪಾಟಲೀಪುರದ ಕಡೆಗೆ ತೆರಳಿದನು.

ಭದ್ರಭಟಾದಿಗಳು ಆಯುಧಪಾಣಿಗಳಾಗಿ ಮಲಯಕೇತುವಿನ ಶಯನ ಗೃಹವನ್ನು ಪ್ರವೇಶಿಸಿ ಅಲ್ಲಿದ್ದ ಕಾವಲುಗಾರರನ್ನು ಮೊದಲು ಬಂಧಿಸಿದರು. ಆ ಗಲಭೆಗೆ ರಾಜಕುಮಾರನು ಎಚ್ಚತ್ತು ವಿಚಾರವೇನೆಂಬುದನ್ನು ತಿಳಿಯಬೇಕೆ ನ್ನುವಷ್ಟರಲ್ಲಿ ಆ ಸೇನಾಪತಿಗಳು ಅವನ ಸುತ್ತಲೂ ಬಂದು ನಿಂತರು. ಮಲಯ ಕೇತುವು ಆಶ್ಚರ್ಯದಿಂದ ಅವರನ್ನು ಪ್ರಶ್ನಿಸಲು, ಅವರು 'ರಾಜಪುತ್ರ, ಅಮಾ ತ್ಯರು ಪಾಟಲೀಪುರವನ್ನು ನಿಮ್ಮ ವಶಮಾಡುವಂತೆ ಪ್ರತಿಜ್ಞೆ ಮಾಡಿದ ರೀತಿ ಯಲ್ಲಿ ಆ ನಗರವನ್ನು ಸ್ವಾಧೀನಪಡಿಸಿಕೊಂಡು ಈಗ ಜಾಗ್ರತೆಯಾಗಿ ತಮ್ಮನ್ನು ಕರೆತರುವಂತೆ ಈ ಪಾಲಕಿಯನ್ನು ಕಳುಹಿಸಿದ್ದಾರೆ. ಸಾವಕಾಶ ಮಾಡದೆ ಈ ಅಂದಣವನ್ನು ಹತ್ತಿರಿ.' ಎಂದು ಕೇಳಿಕೊಂಡರು.

ಅದನ್ನು ಕೇಳಿ ಮಲಯಕೇತುವು—ನಮ್ಮಿಂದ ತಿರಸ್ಕೃತನಾಗಿ ಹೋದ ರಾಕ್ಷಸನು ನಮಗೆ ಅಂದಣವನ್ನು ಕಳುಹಿಸಿದನೆಂದರೆ ನಂಬತಕ್ಕ ಮಾತಲ್ಲ. ಅದಿರಲಿ; ಈಗ ನಮ್ಮ ಬಾಗುರಾಯಣನು ಎಲ್ಲಿರುವನು?—ಎಂದು ಸೇನಾಪತಿ ಗಳನ್ನು ಕೇಳಿದನು. ಅದಕ್ಕೆ ಅವರು—ಆತನೂ ರಾಕ್ಷಸನೊಡನೆ ಆಗಲೇ ತೆರಳಿದನು—ಎಂದು ಉತ್ತರವಿತ್ತರು.

ಮಲಯಕೇತುವಿಗೆ ಆಗ ಏನೋ ವಿಪತ್ತು ಸಂಭವಿಸಿತೆಂದು ಗೊತ್ತಾ ಯಿತು. 'ರಾಕ್ಷಸನ ಕಪಟವನ್ನು ವ್ಯಕ್ತಪಡಿಸಿ ಅವನು ನಮ್ಮಿಂದ ತಿರಸ್ಕೃತ ನಾಗಿ ಹೋಗುವಂತೆ ಮಾಡಿ ನಮಗೆ ಆಪ್ತನಾಗಿದ್ದ ಬಾಗುರಾಯಣನೇ ಅಮಾತ್ಯರಾಕ್ಷಸನ ಸಂಗಡ ತೆರಳಿದನೆಂದರೆ ಇನ್ನು ಯೋಚಿಸಬೇಕಾಗಿಯೇ ಇಲ್ಲ. ಇದರಿಂದ ಪಾಟಲೀಪುರದಿಂದ ಬಂದಿದ್ದವರೆಲ್ಲರೂ ಶತ್ರುಗಳಿಂದ ಪ್ರೇರಿತರಾಗಿ ಬಂದಿದ್ದವರೆಂಬುದು ಚೆನ್ನಾಗಿ ವ್ಯಕ್ತವಾಯಿತು. ಎಲ್ಲರೂ ಸಮಯವನ್ನು ನೋಡಿ ನಮಗೆ ವಿಪತ್ತನ್ನುಂಟುಮಾಡಲು ಕಾದಿದ್ದರು. ಈಗ ನನ್ನ ಸಹಾಯಕ್ಕೆ ಯಾರೂ ಇಲ್ಲದಂತಾಯಿತು.

ಶತ್ರುಗಳ ಕಪಟವನ್ನರಿಯದೆ ಚಿತ್ರವರ್ಮಾದಿಗಳನ್ನು ಅನ್ಯಾಯವಾಗಿ ಕೊಲ್ಲಿಸಿದೆ. ಅದರಿಂದ **ಉಳಿದ** ಸಾಮಂತರು ಹೆದರಿ ಓಡಿಹೋದರು.

ಶೇಖರನೂ ಹತ್ತಿರವಿಲ್ಲದಂತಾಯಿತು. ಈಗ ಪಶ್ಚಾತ್ತಾಪಪಟ್ಟು ಏನು ಉಪಯೋಗ? ನಾನೇನಾದರೂ ಇವರಿಗೆ ಎದುರುಬಿದ್ದರೆ ಇವರು ನನ್ನನ್ನು ಅವಮಾನಪಡಿಸಿ ಬಂಧಿಸುವರು. ಅದಕ್ಕಿಂತ ಇವರು ಹೇಳಿದಂತೆ ಪಾಲಕಿಯಲ್ಲಿ ಕುಳಿತು ಇವರು ಕರೆದುಕೊಂಡು ಹೋದಕಡೆ ಹೋಗುವುದೇ ಉತ್ತಮ.' ಎಂದು ಮನಸ್ಸಿನಲ್ಲಿ ಯೋಚಿಸಿ ಸೇನಾಪತಿಗಳ ಮಾತಿಗೆ ಒಪ್ಪಿಕೊಂಡನು. ಭದ್ರಭಟಾದಿಗಳು ಮಲಯಕೇತುವಿನೊಡನೆ ಶಾಹುರೀನಗರವನ್ನು ಬಿಟ್ಟು ಪಾಟಲೀಪುರದ ಕಡೆಗೆ ಬರುತ್ತಿದ್ದರು.

ಸಿದ್ಧಾರ್ಥಕನು ರಾಕ್ಷಸನಿಗೆ ಕಾಣಿಸಿಕೊಳ್ಳದಂತೆ ಅವನ ಮಾರ್ಗವನ್ನನುಸರಿಸಿ ಪಾಟಲೀಪುರವನ್ನು ಪ್ರವೇಶಿಸಿ ಚಾಣಕ್ಯನನ್ನು ಕಂಡನು. ಚಾಣಕ್ಯನು 'ಸಿದ್ಧಾರ್ಥಕ, ಕ್ಷೇಮದಿಂದ ಬಂದೆಯಾ? ನೀನು ಹೋಗಿದ್ದ ಕೆಲಸವು ಹೇಗಾಯಿತು? ಅಮಾತ್ಯನ ವಿಚಾರವೇನು? ಬಾಗುರಾಯಣಾದಿಗಳು ಹೇಗಿರುವರು?' ಎಂದು ಪ್ರಶ್ನಿಸಿದನು. ಸಿದ್ಧಾರ್ಥಕನು ತಾನು ಪಾಟಲೀಪುರದಿಂದ ಹೊರಟುದು ಮೊದಲುಗೊಂಡು ಮರಳಿ ಅಲ್ಲಿಗೆ ಬರುವವರೆಗೂ ನಡೆದ ಎಲ್ಲಾ ಸಂಗತಿಗಳನ್ನೂ ವಿವರವಾಗಿ ತಿಳಿಸಿದನು. ಮಲಯಕೇತುವು ಕೈಸೆರೆಯಾಗಿ, ಅಮಾತ್ಯರಾಕ್ಷಸನು ಆ ಪುರಕ್ಕೇ ಬಂದು ಆಯುಧಪಾಣಿಯಾಗಿ ವಸಂತವನದಲ್ಲಿ ಅಡಗಿರುವ ಸಮಾಚಾರವನ್ನು ಸಿದ್ಧಾರ್ಥಕನಿಂದ ಕೇಳಿ ಆನಂದಭರಿತನಾಗಿ ಚಾಣಕ್ಯನು ಸಿದ್ಧಾರ್ಥಕನೊಡನೆ ಚಂದ್ರಗುಪ್ತನ ಅರಮನೆಗೆ ಬಂದನು. ಚಂದ್ರಗುಪ್ತನು ಅವರನ್ನು ಗೌರವದಿಂದ ಉಪಚರಿಸಿ ಸುವರ್ಣಪೀಠದಲ್ಲಿ ಕುಳ್ಳಿರಿಸಿ ವಿಷಯ ವಿಶೇಷವನ್ನು ತಿಳಿಯುವ ಕುತೂಹಲದಿಂದ ಕೈಕಟ್ಟಿ ನಿಂತುಕೊಂಡನು.

"ಕುಮಾರ, ನಿನ್ನ ಆಜ್ಞೆಗೆ ವಿರೋಧವಾಗಿ ನಾನು ಕೌಮುದೀ ಮಹೋತ್ಸವವನ್ನು ನಿಲ್ಲಿಸಿ ಕಪಟಕಲಹವನ್ನು ಮಾಡಿದ ತಂತ್ರಕ್ಕೆ ಆದ ಫಲವನ್ನು ಈ ಸಿದ್ಧಾರ್ಥಕನು ತಿಳಿಸಲು ಬಂದಿದ್ದಾನೆ. ಅವನಿಂದಲೇ ಸಂಗತಿಯನ್ನು ಕೇಳು." ಎಂದು ಚಾಣಕ್ಯನು ಹೇಳಲು ಸಿದ್ಧಾರ್ಥಕನು ಸಕಲ ಸಂಗತಿಗಳನ್ನೂ ಚಂದ್ರಗುಪ್ತನಿಗೆ ತಿಳಿಸಿದನು. ಚಂದ್ರಗುಪ್ತನು ಅದನ್ನೆಲ್ಲಾ ಕೇಳಿ ಪರಮಾಶ್ಚರ್ಯದಿಂದ ಚಾಣಕ್ಯನಿಗೆ ಮತ್ತೆ ವಂದಿಸಿ 'ಸ್ವಾಮಿ, ನಾನು ಅರಿಯದೆ ಮಾಡಿದ ವಾಗಪರಾಧಗಳನ್ನು ಕ್ಷಮಿಸಿರಿ. ತಮ್ಮ ಅನುಗ್ರಹದಿಂದ ನನಗೆ ಒದಗಿದ ವಿಪತ್ಪರಂಪರೆಗಳು ಪರಿಹಾರವಾಗಿ ಈ ರಾಜ್ಯಪದವಿಯು ನನಗೆ ಯಾವ

ಕಷ್ಟಕಲಹ.

ಆತಂಕವೂ ಇಲ್ಲದೆ ಸ್ಥಿರವಾದಂತಾಯಿತು. ಅಣುವಿನಂತಿದ್ದ ನನ್ನನ್ನು ಕೈಹಿಡಿದೆತ್ತಿ ಮೇರುಪರ್ವತದಂತೆ ಮಾಡಿದಿರಿ. ಈ ಕೀರ್ತಿಯು ಆಚಂದ್ರಾರ್ಕ ವಾಗಿ ತಮಗೆ ನಿಂತಿತು.' ಎಂದು ಪ್ರಾರ್ಥಿಸಿಕೊಂಡನು.

"ಚಂದ್ರಗುಪ್ತ, ಇದರಲ್ಲಿ ನಿನ್ನ ತಪ್ಪೇನಿಲ್ಲ. ಶತ್ರುನಿಗ್ರಹಕ್ಕಾಗಿಯೇ ನಾನು ಮಾಡಿದ ಕೃತಕಕೋಪವನ್ನು ಸೂಕ್ಷ್ಮಮತಿಯಾದ ನೀನು ಅರ್ಥ ಮಾಡಿಕೊಂಡು ಹಾಗೆ ವರ್ತಿಸಿದುದರಿಂದ ಒಳ್ಳೆಯದೇ ಆಯಿತು. ಅದರಿಂದ ನನಗೆ ಸಂತೋಷವಾಯಿತಲ್ಲದೆ ಅನ್ಯಥಾ ಇಲ್ಲ. ನೀನು ಪರ್ವತರಾಜನಿಂದ ಉಪಕಾರಹೊಂದಿದ್ದೀಯೆ. ಈಗ ಮಲಯಕೇತುವನ್ನು ಕೈಸೆರೆಹಿಡಿಸಿ ತಂದಿರು ವುದು ಅವನನ್ನು ಶಿಕ್ಷಿಸುವುದಕ್ಕಲ್ಲ; ಅವನ ಸಹಾಯ ರಾಕ್ಷಸನಿಗೆ ಮತ್ತೆ ದೊರಕದಿರಲೆಂದು. ಈಗ ಅವರು ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು ಆತನನ್ನು ಸನ್ಮಾನಿಸಿ ನಿನಗೆ ಪಟ್ಟಾಭಿಷೇಕವಾದ ಬಳಿಕ ಅವನ ರಾಜ್ಯಕ್ಕೇ ಮತ್ತೆ ಕಳುಹಿಸಿ ಅವನನ್ನು ನಿನ್ನ ಸ್ವಾಧೀನದಲ್ಲಿಟ್ಟುಕೊಂಡು ಸುಖವಾಗಿರು." ಎಂದು ಚಾಣಕ್ಯನು ಚಂದ್ರಗುಪ್ತನಿಗೆ ಹೇಳಿದನು.

ಬಳಿಕ ಚಾಣಕ್ಯನು ಸಿದ್ಧಾರ್ಥಕನನ್ನು ಕರೆದು 'ಇನ್ನು ಸ್ವಲ್ಪ ಕಾರ್ಯ ಶೇಷವಿರುವುದು. ಅದೂ ನಿನ್ನ ಮೂಲಕವೇ ನಡೆಯಲಿ.' ಎಂದು ಕಿವಿಯಲ್ಲಿ ಹೇಳಬೇಕಾದುದನ್ನೆಲ್ಲಾ ಹೇಳಿ ಅವನನ್ನು ಕಳುಹಿಸಿದನು. ಅಷ್ಟರಲ್ಲಿ ಭಾಗುರಾಯಣನು ಬಂದು ಚಾಣಕ್ಯನಿಗೆ ವಂದಿಸಿದನು. ಚಾಣಕ್ಯನು ಮುಗುಳು ನಗೆಯಿಂದ 'ಸೇನಾಪತಿ, ನಿನ್ನ ಕಾರ್ಯತತ್ಪರತೆಯನ್ನು ಕೇಳಿ ಬಹಳ ಸಂತೋಷ ವಾಯಿತು. ನಿನ್ನಂಥ ಆಪ್ತರಿದ್ದುದರಿಂದಲೇ ರಾಜ್ಯಲಕ್ಷ್ಮಿಯು ಚಂದ್ರಗುಪ್ತ ನನ್ನು ವರಿಸಿದಳು. ಸಕಲ ಸೈನ್ಯವೂ ಈಗ ನಿನ್ನ ಅಧೀನದಲ್ಲೇ ಇರುವುದರಿಂದ ನೀನು ಕೀರ್ತಿಶಾಲಿಯಾಗಿ ಸುಖದಿಂದ ಚಂದ್ರಗುಪ್ತನನ್ನು ಸೇವಿಸುತ್ತಿರು. ಈಗ ಇಲ್ಲಿಗೆ ಬರುವ ಮಲಯಕೇತುವಿಗೆ ರಾಜಯೋಗ್ಯವಾದ ಬಿಡಾರವನ್ನು ಗೊತ್ತುಮಾಡಿ ನೀನೇ ಆತನನ್ನು ಕಾದಿದ್ದು ಆತನಿಗೆ ಯಾವ ರಾಜೋಪ ಚಾರವೂ ಕಡಿಮೆಯಾಗದಂತೆ ನೋಡಿಕೊ.' ಎಂದು ಆಜ್ಞಾಪಿಸಿ ಆತನನ್ನು ವಸ್ತ್ರಭೂಷಣಾದಿಗಳಿಂದ ಸನ್ಮಾನಿಸಿ ಕಳುಹಿಸಿದನು.

# ವಸಂತವನದಲ್ಲಿ

ಸಿದ್ಧಾರ್ಥಕನು ರಹಸ್ಯವಾಗಿ ಚಾಣಕ್ಯನು ತನಗೆ ಹೇಳಿದ ಮಾತಿನಂತೆ ಪಶುಲೋಮನೆಂಬುವನನ್ನು ಕಂಡನು. ಅವನಿಗೆ ಹೇಳತಕ್ಕ ಮಾತುಗಳನ್ನು ಹೇಳಿ, ರಾಕ್ಷಸನು ಅಡಗಿರುವ ವಸಂತವನವನ್ನು ತೋರಿಸಿ ಅವನನ್ನು ಅಲ್ಲಿಗೆ ಕಳುಹಿಸಿದನು. ತಾನು ಚಂದನದಾಸನನ್ನು ಶೂಲವನ್ನು ನೆಟ್ಟಿರುವ ವಧ್ಯ ಸ್ಥಾನಕ್ಕೆ ಕರೆತರುವುದಕ್ಕಾಗಿ ಹೋದನು.

ಅಮಾತ್ಯರಾಕ್ಷಸನು ಪಾಟಲೀಪುರದ ವಸಂತವನದ ಬಳಿಗೆ ಬಂದನು. ಚಂದನದಾಸನ ವಿಚಾರವನ್ನು ಹೇಗೆ ತಿಳಿಯುವುದೆಂದು ಅವನ ಮನಸ್ಸು ತವಕಿಸುತ್ತಿತ್ತು. ದಾಹಾತುರದಿಂದ ಬಳಲಿದ್ದ ಅವನು ಆ ಉದ್ಯಾನದ ಸರಸಿ ಯಲ್ಲಿ ಇಳಿದು ಜಲಪಾನಮಾಡಿ ಅಲ್ಲಿ ವಿಶ್ರಮಿಸಿಕೊಂಡನು. ಆಗ ಅವನಿಗೆ ನಂದರ ವೈಭವದ ನೆನಪಾಯಿತು. ನಂದರು ಆ ಸರೋವರದಲ್ಲಿ ಜಲಕೇಳಿ ಯಾಡಿ ನಲಿಯುತ್ತಿದ್ದುದನ್ನು ನೆನೆದು ದುಃಖಿಸಿದನು. ಉದ್ಯಾನದ ಲತಾಗೃಹ ದಲ್ಲಿ ಕುಳಿತು ತನ್ನೊಡನೆ ಅವರು ವಿಶ್ವಾಸದಿಂದ ಆಡುತ್ತಿದ್ದ ಸರಸದ ಮಾತು ಗಳನ್ನು ಸ್ಮರಿಸಿಕೊಂಡು ಹಂಬಲಿಸಿದನು. ನಂದರು ರಾಜಭೋಗವನ್ನನು ಭವಿಸುತ್ತಿದ್ದ ಆ ವಸಂತವನವು ಆಗ ಅವನಿಗೆ ಹಿತವಾಗಿ ತೋರಲಿಲ್ಲ. ಯಾರ ದೃಷ್ಟಿಗೂ ಬೀಳದೆ ಅವನು ಅಲ್ಲಿ ತಂಗಿದ್ದನು.

ಆ ಸಮಯದಲ್ಲಿ ಸಿದ್ಧಾರ್ಥಕನಿಂದ ನೇಮಿಸಲ್ಪಟ್ಟಿದ್ದ ಪಶುಲೋಮ ನೆಂಬ ಚಾಣಕ್ಯನ ಶಿಷ್ಯನು ಅಮಾತ್ಯರಾಕ್ಷಸನು ಇರುವ ಜಾಗವನ್ನು ಕಂಡು ಅದರ ಸಮೀಪದ ಒಂದು ಮರದ ಕೊಂಬೆಗೆ ಹಗ್ಗವನ್ನು ಹಾಕಿ, ಪಕ್ಕದಲ್ಲಿದ್ದ ಹುತ್ತದ ಮೇಲೆ ನಿಂತು ಆ ನೇಣಿನ ಜೀರುಕುಣಿಕೆಯನ್ನು ತನ್ನ ಕತ್ತಿಗೆ ಹಾಕಿ ಕೊಂಡು ನಾಲ್ಕು ದಿಕ್ಕುಗಳಿಗೂ ಕೈಮುಗಿಯುತ್ತ ರಾಕ್ಷಸನಿಗೆ ಕೇಳಿಸುವಂತೆ ದೇವತೆಗಳನ್ನು ಪ್ರಾರ್ಥಿಸಿಕೊಳ್ಳುತ್ತಿದ್ದನು. 'ಇಂದ್ರಾದಿ ದಿಕ್ಪಾಲಕರಿರಾ, ಇದೋ ಕಡೆಯದಾಗಿ ನಿಮಗೆ ಸಾಷ್ಟಾಂಗ ವಂದನೆಗಳನ್ನು ಅರ್ಪಿಸುತ್ತಿದ್ದೇನೆ. ನಾನು ಹುಟ್ಟು ಮೊದಲುಗೊಂಡು ಈವರೆಗೂ ಯಾವ ಪಾಪಕರ್ಮಗಳನ್ನೂ ಆಚರಿಸಿಲ್ಲ. ಕಾಮಕ್ರೋಧಾದಿ ಅರಿಷಡ್ವರ್ಗಗಳಿಗೆ ವಶನಾಗದೆ ಲೋಕಾಪ ವಾದಕ್ಕೆ ಅಂಜಿ ಸನ್ಮಾರ್ಗದಿಂದ ಜೀವನವನ್ನು ನಡೆಸಿದ್ದೇನೆ. ಯಾರಿಗೂ

ಕೇಡು ಬಯಸಿದವನಲ್ಲ. ಹೀಗಿದ್ದರೂ ಈಗ ನಾನು ಧರ್ಮಜ್ಞನಾದ ನನ್ನ ಆಪ್ತಮಿತ್ರನಿಗೆ ಉಂಟಾಗುವ ಮರಣವನ್ನು ನೋಡಬೇಕಾಗಿದೆ. ಅದನ್ನು ನೋಡುವುದಕ್ಕಿಂತ ಅವನಿಗೆ ಮುಂಚಿತವಾಗಿಯೇ ನಾನು ಪ್ರಾಣತ್ಯಾಗಮಾಡ ಬೇಕೆಂದು ನಿಶ್ಚಯಿಸಿದ್ದೇನೆ. ಈ ಆತ್ಮಹತ್ಯಾದೋಷ ನನಗೆ ಸಂಭವಿಸದಂತೆ ಅನುಗ್ರಹ ಮಾಡಿರಿ.' ಎಂದು ದೈನ್ಯದಿಂದ ಬೇಡಿಕೊಳ್ಳುತ್ತಿದ್ದನು. ಆ ಕೂಗನ್ನು ಕೇಳಿ ಅಮಾತ್ಯನು–ಇವನು ಯಾರೋ ನನ್ನಂತೆಯೇ ಸ್ನೇಹಿತನಿಗೆ ಒದಗಿದ ವಿಪತ್ತಿನಿಂದ ಪರಿತಪಿಸುತ್ತ ದೇಹತ್ಯಾಗ ಮಾಡಲು ಉದ್ಯುಕ್ತನಾಗಿ ದ್ದಾನೆ. ಅಯ್ಯೋ ಪಾಪ, ಇವನಿಗೇನು ನೋವೋ ವಿಚಾರಿಸೋಣ—ಎಂದು ಆ ವೃಕ್ಷದ ಬಳಿಗೆ ಬಂದು ಆತನೊಡನೆ ಪ್ರಸ್ತಾಪಿಸಿದನು.

"ಅಯ್ಯಾ, ನೀನು ಯಾರು? ಆತ್ಮಹತ್ಯೆಗೆ ಪ್ರಯತ್ನಿಸುತ್ತಿರುವೆಯಲ್ಲ. ನೀನು ಯಾವ ಕಾರಣಕ್ಕಾಗಿ ಈ ಮಹಾದೋಷಕರವಾದ ಪ್ರಯತ್ನಕ್ಕೆ ಮನಸ್ಸು ಮಾಡಿರುವೆ? ನಿನಗೇನು ಆಪ್ತಜನರ ಸಹಿಸಲಾಗದ ವಿಯೋಗ ವುಂಟಾಗಿರುವುದೆ? ಅಥವಾ ಶತ್ರುಗಳಿಂದ ಏನಾದರೂ ಮಹಾವಿಪತ್ತು ಸಂಭವಿ ಸಿತೆ? ಇಲ್ಲವೇ ಕೊಟ್ಟಭಾಷೆಯನ್ನು ನಡೆಸಿಕೊಡಲಾರದೆ ಜೀವನದಲ್ಲಿ ಜಿಗುಪ್ಸೆ ಯುಂಟಾಯಿತೆ? ಯಥಾರ್ಥವನ್ನು ತಿಳಿಸಿದರೆ ನನ್ನ ಕೈಲಾದ ಸಹಾಯ ಮಾಡಬಹುದು."

"ಮಹಾಪುರುಷನೆ, ನಿರ್ಭಾಗ್ಯನಾದ ನನ್ನ ವೃತ್ತಾಂತವನ್ನು ಏಕೆ ಕೇಳುತ್ತೀಯೆ? ಅದನ್ನು ತಿಳಿದು ನಿನ್ನ ಮನಸ್ಸಿನ ಶಾಂತಿಯನ್ನು ಹಾಳು ಮಾಡಿಕೊಳ್ಳುವುದು ಬೇಡ. ವೃಥಾ ಕಾಲಹರಣವಲ್ಲದೆ ಮತ್ತಾವ ಪ್ರಯೋ ಜನವೂ ಇಲ್ಲ. ನೀನು ಮಾರ್ಗಸ್ಥನೆಂದು ತೋರುತ್ತಿದೆ. ನಿನ್ನ ದಾರಿಯನ್ನು ಹಿಡಿದು ತೆರಳು. ನನ್ನ ದಾರಿಗೆ ಅಡ್ಡಬರಬೇಡ."

"ಮಿತ್ರನೆ, ನೀನು ಹೀಗೆ ಹೇಳುವುದು ಯುಕ್ತವಲ್ಲ. ನಿನ್ನ ಕಷ್ಟವನ್ನು ಕೇಳುವುದರಲ್ಲಿ ನನಗಾವ ತೊಂದರೆಯೂ ತೋರದು. ಪುರುಷನಾದವನು ಮತ್ತೊಬ್ಬರ ನೋವನ್ನು ಕಂಡು ಸುಮ್ಮನೆ ಹೋಗಬಾರದೆಂಬ ನೀತಿಯುಂಟು. ನಿನ್ನ ತೊಂದರೆ ಏನಿದ್ದರೂ ನನ್ನೊಡನೆ ತಿಳಿಸು."

"ಪುಣ್ಯಾತ್ಮನೆ, ನಿನಗೆ ಅಷ್ಟು ಇಷ್ಟವಾದರೆ ಹೇಳದೆ ವಿಧಿಯಿಲ್ಲ. ಈ ಪಾಟಲೀಪುರದಲ್ಲಿ ನನಗೆ ಪ್ರಾಣಸಖನಾದ ವಿಷ್ಣುದಾಸನೆಂಬ ವರ್ತಕನಿದ್ದಾನೆ.

ಆತನು ಈಗ ಸಾವನ್ನಪ್ಪಲು ನಿಶ್ಚಯಿಸಿದ್ದಾನೆ. ಆ ಮರಣವನ್ನು ನೋಡ ಲಾರದೆ ಅವನಿಗಿಂತ ಮುಂಚಿತವಾಗಿಯೇ ನಾನು ಪ್ರಾಣತ್ಯಾಗಮಾಡುವುದೇ ಉತ್ತಮವೆಂದು ಭಾವಿಸಿ ಈ ನಿರ್ಜನ ಪ್ರದೇಶಕ್ಕೆ ಬಂದೆನು. ಈಗ ನಿನ್ನ ದೃಷ್ಟಿಗೆ ಬಿದ್ದುದೇ ತಪ್ಪಾಯಿತು."

"ನಿನ್ನ ಮಿತ್ರನಾದ ವಿಷ್ಣುದಾಸನು ಏಕೆ ಮರಣವನ್ನು ನಿಶ್ಚಯಿ ಸಿದ್ದಾನೆ?"

"ಪಥಿಕನೆ, ವಿಷ್ಣುದಾಸನಿಗೆ ಧನಿಕನಾದ ಚಂದನದಾಸನೆಂಬ ಮಿತ್ರ ನೊಬ್ಬನುಂಟು. ಆತನು ಮಹಾ ಉದಾರಿ; ಧರ್ಮಜ್ಞ; ಮೇಲಾಗಿ ಪರೋಪ ಕಾರಿ. ಅಂಥ ಸತ್ಪುರುಷನಿಗೆ ಮಹಾವಿಪತ್ತೊಂದು ಸಂಭವಿಸಿತು. ಅದನ್ನು ತಿಳಿದು ಆ ವ್ಯಸನವನ್ನು ಸಹಿಸಲಾರದೆ ವಿಷ್ಣುದಾಸನು ತನ್ನ ಸರ್ವಸ್ವವನ್ನೂ ದೀನಾನಾಥರಿಗೆ ದಾನಮಾಡಿ ಅಗ್ನಿಪ್ರವೇಶಮಾಡಲು ನಿಶ್ಚಯಿಸಿರುವನು. ನನ್ನ ಪ್ರಾರ್ಥನೆಯಲ್ಲಾ ವ್ಯರ್ಥವಾಯಿತು. ಅಂಥ ಸ್ನೇಹಿತರು ಹೋದಮೇಲೆ ನಾನಿದ್ದು ಫಲವೇನು? ಎಂದು ಚಿಂತಿಸಿ ಈ ಜೀವದಾಸೆಯನ್ನು ತೊರೆದಿದ್ದೇನೆ."

ಆ ಮಾತನ್ನು ಕೇಳಿ ರಾಕ್ಷಸನು–ಚಂದನದಾಸನಿಗೆ ಅಪಾಯ ಸಂಭವಿ ಸಿದೆ. ಅವನು ಇನ್ನೂ ಜೀವಂತನಾಗಿದ್ದರೆ ನನ್ನ ಪ್ರಾಣವನ್ನಾದರೂ ಕೊಟ್ಟು ಅವನನ್ನು ಬದುಕಿಸುವೆನು. ಕಾರ್ಯಮಿಂಚಿಹೋಗಿದ್ದರೆ ನಾನೂ ಅವನ ಮಾರ್ಗವನ್ನೇ ಹೊಂದುವೆನು—ಎಂದು ನಿಶ್ಚಯಿಸಿ ಚಂದನದಾಸನಿಗೆ ಉಂಟಾಗಿರುವ ವಿಪತ್ತನ್ನು ವಿವರಿಸುವಂತೆ ಪಶುಲೋಮನನ್ನು ಕೇಳಿದನು.

ಅದಕ್ಕೆ ಪಶುಲೋಮನು—ಅಯ್ಯಾ, ಅದನ್ನು ಏನೆಂದು ಹೇಳಲಿ! ಚಂದನದಾಸನು ನಂದರ ಮಂತ್ರಿಯಾಗಿದ್ದ ಅಮಾತ್ಯರಾಕ್ಷಸನ ಮಿತ್ರನಂತೆ. ಅಮಾತ್ಯನು ನಂದರ ಮರಣಾನಂತರ ಪಟ್ಟಣವನ್ನು ಬಿಟ್ಟುಹೋಗುವಾಗ ತನ್ನ ಹೆಂಡತಿಮಕ್ಕಳನ್ನು ಅವನ ಮನೆಯಲ್ಲಿ ಬಿಟ್ಟುಹೋದನಂತೆ. ಚಾಣಕ್ಯನು ಆ ಸಂಗತಿಯನ್ನು ಹೇಗೋ ತಿಳಿದು ಚಂದನದಾಸನನ್ನು ಕರೆಯಿಸಿ ಅಮಾತ್ಯನ ಕುಟುಂಬವನ್ನು ಚಂದ್ರಗುಪ್ತನ ವಶಪಡಿಸುವಂತೆ ಆಜ್ಞೆಮಾಡಿದನಂತೆ. ಅದಕ್ಕೆ ಚಂದನದಾಸನು ಆ ವಿಚಾರವೇ ತನಗೆ ತಿಳಿಯದೆಂದು ಹೇಳಲು ಕುಪಿತನಾದ ಚಾಣಕ್ಯನು ಅವನನ್ನು ಶೂಲಕ್ಕೆಹಾಕುವಂತೆ ಭಟರಿಗೆ ನೇಮಿಸಿದನಂತೆ. ಚಂದನ ದಾಸನನ್ನು ವಧ್ಯಸ್ಥಾನಕ್ಕೆ ಕರೆದೊಯ್ಯುತ್ತಿರುವರೆಂಬ ಸಂಗತಿಯನ್ನು ತಿಳಿದು

ನನ್ನ ಮಿತ್ರನಾದ ವಿಷ್ಣುದಾಸನು ಪುರದ ಹೊರಗಡೆ ಅಗ್ನಿ ಕುಂಡವನ್ನು ನಿರ್ಮಿಸುವಂತೆ ಸೇವಕರಿಗೆ ಆಜ್ಞಾಪಿಸಿ ಮನೆಯಿಂದ ಹೊರಡಲು ನನಗೂ ಜೀವನದಲ್ಲಿ ಬೇಸರವುಂಟಾಗಿ ಇಲ್ಲಿಗೆ ಬಂದೆನು—ಎಂದು ತಿಳಿಸಿದನು.

ಆ ಮಾತನ್ನು ಕೇಳಿ ರಾಕ್ಷಸನು ಇನ್ನು ನಿಧಾನಮಾಡಲಾಗದೆಂದು ಯೋಚಿಸಿ 'ಅಯ್ಯಾ ಸ್ನೇಹಿತನೆ, ಇನ್ನು ನಿನ್ನ ಈ ಪ್ರಯತ್ನವನ್ನು ನಿಲ್ಲಿಸು. ನಿನ್ನ ಮಿತ್ರನಾದ ವಿಷ್ಣುದಾಸನೂ ಅಗ್ನಿಪ್ರವೇಶಮಾಡಬೇಕಾಗಿಲ್ಲ. ಚಂದನ ದಾಸನನ್ನು ಕಷ್ಟದಿಂದ ಪಾರುಮಾಡುವೆನು.' ಎಂದು ನುಡಿದನು.

"ಅಯ್ಯಾ, ನೀನೇನು ಹೇಳುತ್ತಿರುವೆ ? ಚಂದನದಾಸನ ವಿಪತ್ತು ಹೇಗೆ ಪರಿಹಾರವಾಗುವುದು ?"

"ಇದೋ ಈ ಖಡ್ಗದಿಂದ."

ಎಂದು ಕತ್ತಿಯನ್ನು ಝಳಪಿಸುತ್ತ ರೋಷಗೊಂಡ ಅಮಾತ್ಯನನ್ನು ಕಂಡು ಪಶುಲೋಮನು–ಈತನು ಕತ್ತಿಹಿಡಿದು ವಧ್ಯಸ್ಥಾನದ ಬಳಿಗೆ ಹೋದರೆ ಮುಂದೆ ಕಾರ್ಯವು ಹೇಗಾಗುವುದೋ ? ಆದಕಾರಣ ಈತನು ಖಡ್ಗವನ್ನು ಬಿಸುಟು ನಿರಾಯುಧನಾಗಿ ಹೋಗುವಂತೆ ಮಾಡಬೇಕೆಂದು ಯೋಚಿಸಿ 'ಸ್ವಾಮಿ, ಚಂದನದಾಸನಿಗೆ ಆಪದ್ಬಂಧುಗಳಾಗಿ ನಿಂತಿರುವ ತಾವು ಯಾರೆಂದು ತಿಳಿಯಬೇಕು.' ಎಂದು ಪ್ರಶ್ನಿಸಿದನು.

"ಆ ಚಂದನದಾಸನ ಆಪತ್ತಿಗೆ ಕಾರಣನಾದ ನಿರ್ದಯನಾದ ಅಮಾತ್ಯನು ನಾನೇ. ಇನ್ನು ನೀವು ಚಿಂತಿಸಬೇಕಾಗಿಲ್ಲ."

ಪಶುಲೋಮನು ಅವನು ಅಮಾತ್ಯನೆಂದು ತಿಳಿದುಕೊಂಡವನಂತೆ ಆಶ್ಚರ್ಯಪಡುತ್ತ ಕೊರಳ ಹಗ್ಗವನ್ನು ಬಿಸುಟು 'ಅಮಾತ್ಯರೆ, ತಮ್ಮ ದರ್ಶನ ಭಾಗ್ಯದಿಂದ ನಮ್ಮ ವಿಪತ್ತುಗಳು ಇನ್ನು ತೊಲಗಿದಂತೆಯೇ ಸರಿ. ತಾವು ಅಸಹಾಯ ಶೂರರೆಂಬುದು ಪ್ರಖ್ಯಾತವಾಗಿದೆ. ಆದರೆ ಈಗ ನನ್ನದೊಂದು ವಿಜ್ಞಾಪನೆಯುಂಟು. ತಾವು ಶಸ್ತ್ರಹಿಡಿದು ವಧ್ಯಸ್ಥಾನದ ಬಳಿಗೆ ಪ್ರವೇಶಿಸಿದರೆ ಏನಾದರೂ ಪ್ರಮಾದ ಜರುಗಬಹುದು. ಮೊದಲು ಶಕಟದಾಸನೆಂಬುವನನ್ನು ಶೂಲಕ್ಕೇರಿಸಲು ಕರೆದೊಯ್ದಾಗ ಯಾರೋ ಖಡ್ಗಪಾಣಿಗಳಾಗಿ ಬಂದು ದೂತ ರನ್ನು ಹೆದರಿಸಿ ಅವನನ್ನು ಬಿಡಿಸಿಕೊಂಡು ಹೋದರಂತೆ. ಆ ದಿನದಿಂದ ವಧ್ಯ ಸ್ಥಾನದ ಬಳಿಗೆ ಯಾರಾದರೂ ಆಯುಧಪಾಣಿಗಳಾಗಿ ಬಂದರೆ ಅವರು ಹತ್ತಿರ

ಬರುವ ಮುಂಚೆಯೇ ಏನೂ ನೋಡದೆ ಆ ರಾಜದ್ರೋಹಿಯನ್ನು ಸಂಹರಿಸಿ ಬಳಿಕ ಆಯುಧ ಹಿಡಿದು ಬಂದವರನ್ನು ಬಂಧಿಸಿ ತರಬೇಕೆಂದು ಚಾಣಕ್ಯನ ಆಜ್ಞೆಯಾಗಿದೆಯಂತೆ. ಈಗ ತಾವು ಖಡ್ಗಧರಿಸಿ ಹೊರಡುವುದು ಉಚಿತವಾಗಿ ತೋರುವುದಿಲ್ಲ. ಮಿತ್ರನಾದ ಚಂದನದಾಸನನ್ನು ಶೌರ್ಯಮುಖದಿಂದ ಬಿಡಿಸುವ ಪ್ರಯತ್ನಮಾಡುವುದಕ್ಕಿಂತ ಬೇರೆ ಉಪಾಯವನ್ನು ಚಿಂತಿಸಿದರೆ ಉತ್ತಮ ವೆಂದು ನನಗೆ ತೋರುತ್ತಿದೆ. ನಿಮ್ಮಂಥವರಿಗೆ ವಿಜ್ಞಾಪಿಸಿಕೊಳ್ಳುವ ಶಕ್ತಿ ನನಗಿಲ್ಲ.' ಎಂದು ನಮ್ರತೆಯನ್ನು ತೋರ್ಪಡಿಸಿದನು.

ಅಮಾತ್ಯನಿಗೆ ಪಶುಲೋಮನು ಹೇಳಿದ ಅಭಿಪ್ರಾಯವು ಸರಿಯೆಂದು ತೋರಿತು. 'ನನ್ನ ನಿಮಿತ್ತವಾಗಿ ಚಂದನದಾಸನಿಗೆ ಉಂಟಾಗುವ ಶೂಲಾ ರೋಹಣಕ್ಕೆ ನಾನೇ ಸಮ್ಮತನಾಗಿ ನನ್ನ ಪ್ರಾಣವನ್ನು ಅರ್ಪಿಸಿ ಅವನನ್ನು ಬಿಡುಗಡೆಮಾಡುವೆನು. ಇದಕ್ಕಿಂತ ಶ್ರೇಷ್ಠವಾದ ಧರ್ಮ ನನಗೆ ಬೇರೆಯಿಲ್ಲ' ಎಂದು ಭಾವಿಸಿ ಖಡ್ಗವನ್ನು ಬಿಸುಟು ಶೂಲಸ್ಥಾನದ ಬಳಿಗೆ ಹೊರಟನು.

ಆಗ ಪಶುಲೋಮನು 'ಅಮಾತ್ಯರೆ, ಹಾಗಾದರೆ ನಾನು ಬೇಗ ಹೋಗಿ ತಮ್ಮ ಅಭಯವನ್ನು ತಿಳಿಸಿ ನನ್ನ ಮಿತ್ರನನ್ನು ಅಗ್ನಿಪ್ರವೇಶಮಾಡದಂತೆ ತಡೆಯುವೆನು.' ಎಂದು ಹೇಳಿ, ಅಲ್ಲಿಂದ ಓಡಿಹೋಗಿ ಚಾಣಕ್ಯನನ್ನು ಕಂಡು ರಾಕ್ಷಸನ ಸಮಾಚಾರವನ್ನೆಲ್ಲಾ ಹೇಳಿದನು.

## ಸಮಾಗಮ

ಚಾಣಕ್ಯನ ಸಂಕೇತದಂತೆ ವೇಷಧಾರಿಗಳಾದ ಘಾತುಕರು ಚಂದನ ದಾಸನ ಕೊರಳಿಗೆ ಎಕ್ಕದಹೂವಿನ ಸರವನ್ನು ಹಾಕಿ, ಅವನ ರಾಜದ್ರೋಹ ವನ್ನು ಸಾರುತ್ತ ವಧ್ಯಸ್ಥಾನಕ್ಕೆ ಕರೆದೊಯ್ಯುತ್ತಿದ್ದರು. ಆಗ ಪುರಜನರು ನೆರೆದು ಅದನ್ನು ನೋಡಿ ವ್ಯಸನಪಡುತ್ತ ಮಿತ್ರಕಾರ್ಯಕ್ಕಾಗಿ ಪ್ರಾಣತ್ಯಾಗಕ್ಕೂ ಸಿದ್ಧ ನಾಗಿರುವ ಚಂದನದಾಸನನ್ನು ಹೊಗಳುತ್ತಿದ್ದರು. ಚಂದನದಾಸನ ಪತ್ನೀ ಪುತ್ರರು ರೋದನಮಾಡುತ್ತ ಅವನನ್ನೇ ಹಿಂಬಾಲಿಸಿ ಬರುತ್ತಿದ್ದರು. ಶೂಲವು ಸಮೀಪಿಸಿತು. ಆಗ ಒಬ್ಬ ಘಾತುಕನು—ಶೆಟ್ಟಿಯೆ, ಇದೋ ಶೂಲಸ್ಥಾನವು ನೀನು ಧರಿಸಿಕೊಂಡಿರುವ ಭೂಷಣಗಳು ನಮಗೆ ಸಲ್ಲಬೇಕಾಗಿರುವುದರಿಂದ

ಅವುಗಳನ್ನು ತೆಗೆದುಕೊಡು. ನಿನ್ನ ಜನರನ್ನು ಇನ್ನು ಹಿಂದಕ್ಕೆ ಕಳುಹಿಸು—ಎಂದು ನುಡಿದನು. ಚಂದನದಾಸನು ಪತ್ನೀಪುತ್ರರನ್ನು ಸಮಾಧಾನಗೊಳಿಸಲು ಯತ್ನಿಸಿದನು.

"ಪ್ರಿಯೆ, ಇನ್ನು ನನ್ನ ಮೇಲಿನ ಆಸೆಯನ್ನು ತೊರೆದು ಪುತ್ರನನ್ನು ಕರೆದುಕೊಂಡು ಮನೆಗೆ ತೆರಳು. ಮುಂದಿನ ಘೋರ ಕರ್ಮವನ್ನು ಈ ಕುಮಾರನು ಕಂಡು ಭೀತಿಗೊಂಡು ತೊಂದರೆಗೊಳಗಾಗುವನು. ಈ ಪುತ್ರನನ್ನು ಚೆನ್ನಾಗಿ ನೋಡಿಕೊ." ಎಂದು ತಿಳಿಸಿ ಪ್ರೀತಿಯಿಂದ ಮಗನ ಶಿರವನ್ನು ನೇವರಿಸುತ್ತ ಕಂಬನಿದುಂಬಿದನು.

ಆಗ ಅವನ ಪತ್ನಿಯು—ನಾಥ, ನಿಮ್ಮನ್ನಗಲಿ ನಾನು ಹೇಗೆ ಜೀವಿಸಲಿ? ನನಗೆ ಈ ಪ್ರಪಂಚದಲ್ಲಿ ಆಗಬೇಕಾದುದೇನಿದೆ ? ನಾನು ನಿಮ್ಮ ಸಂಗಡಲೇ ಬರಲು ಅನುಜ್ಞೆ ಕೊಡಿ-ಎಂದು ಪತಿಯ ಪಾದಗಳ ಮೇಲೆ ಬಿದ್ದು ಗೋಳಾಡುತ್ತಿದ್ದಳು.

"ಈ ಕುಮಾರನು ಇನ್ನೂ ಬಾಲಕನು. ಲೋಕವ್ಯವಹಾರ ತಿಳಿದವನಲ್ಲ. ಇವನಿಗೋಸ್ಕರ ನೀನು ಜೀವಿಸಿರಬೇಕು. ಹುಟ್ಟಿದವರಿಗೆ ಮರಣವು ತಪ್ಪಿದ್ದಲ್ಲ" ಎಂದು ಮತ್ತೆ ಪತ್ನಿಗೆ ಚಂದನದಾಸನು ಸಮಾಧಾನ ಹೇಳಿದನು.

"ಪ್ರಿಯತಮ, ನೀವಿಲ್ಲದ ಈ ಪ್ರಪಂಚವು ನನಗೆ ಶೂನ್ಯ. ಸೃಷ್ಟಿಸಿದ ಭಗವಂತನೇ ಈ ಕುಮಾರನನ್ನು ರಕ್ಷಿಸುವನು. ನನಗಿನ್ನು ಈ ಜಗತ್ತಿನಲ್ಲಿ ಜಾಗವಿಲ್ಲ. ನಿಮ್ಮೊಡನೆ ನಾನೂ ಪರಲೋಕವಾಸಿಯಾಗುವೆನು." ಎಂದು ಹೇಳಿ ಮಗುವನ್ನು ಮುದ್ದಿಸುತ್ತ 'ಮಗು, ನಿಮ್ಮ ತಂದೆಯ ಮುಖವನ್ನು ಈಗಲೇ ಚೆನ್ನಾಗಿ ನೋಡಿಬಿಡು. ಅವರು ಹೇಳುವ ಕಡೆಯ ಮಾತುಗಳನ್ನು ಗ್ರಹಿಸು. ಇಷ್ಟು ಬೇಗ ನೀನು ತಬ್ಬಲಿಯಾಗಬೇಕಾದುದನ್ನು ವಿಧಿಯು ನಿನ್ನ ಹಣೆಯಲ್ಲಿ ಬರೆದನು.' ಎಂದು ಹೇಳುತ್ತಿರಲು ಕುಮಾರನು ತಂದೆಯ ಪಾದಗಳ ಮೇಲೆ ಬಿದ್ದು ರೋದಿಸುತ್ತಿದ್ದನು.

"ಅಪ್ಪಾಜಿ, ಇನ್ನು ನಾನು ಯಾರನ್ನು ಅಪ್ಪಾ—ಎಂದು ಪ್ರೀತಿಯಿಂದ ಕೂಗಿ ಆಲಿಂಗಿಸಲಿ ? ತಂದೆಯೆಂದು ಯಾರಿಗೆ ನಮಿಸಿ ಅವರ ಆಶೀರ್ವಾದ ಪಡೆಯಲಿ ? ನಿಮ್ಮನ್ನಗಲಿ ನಾನು ಬದುಕುವುದು ಹೇಗೆ ? ಪರಮಾತ್ಮನಿಗೆ ನನ್ನ ಮೇಲೆ ಇಷ್ಟು ನಿರ್ದಯವುಂಟಾಯಿತೆ ? ಅಯ್ಯೋ, ಇನ್ನು ನನ್ನನ್ನು



ವಧ್ಯಸ್ಥಾನದ ಬಳಿ ಚಂದನದಾಸನನ್ನು ಕರೆದೊಯ್ದಾಗ ಅಮಾತ್ಯನ ಆಗಮನ

ಭಾವಿಸುವವರು ಯಾರು?" ಎಂದು ಗೋಳಾಡುವ ಮಗನನ್ನು ಚಂದನ ದಾಸನು ಬಾಚಿತಬ್ಬಿಕೊಂಡು ಸಂತೈಸಿದನು.

"ತೇಜಸ್ವಿಯೆ, ಚಿಂತೆಯನ್ನು ದೂರಮಾಡು. ನಮ್ಮ ವಂಶದ ಕೀರ್ತಿ ನಿನ್ನಿಂದ ಬೆಳಗಬೇಕಾಗಿದೆ. ನಿನ್ನ ತಾಯಿಯ ಮಾತು ಮೀರದೆ ಸತ್ಯವಂತ ನಾಗಿ ಬಾಳು. ಧರ್ಮವನ್ನಾಚರಿಸಿ ಶ್ರೇಯೋವಂತನಾಗು. ಆದರೆ ಚಾಣಕ್ಯನ ಹೆಸರು ಯಾವ ದೇಶದಲ್ಲಿ ಕೇಳಿಬರುವುದಿಲ್ಲವೋ ಅಲ್ಲಿ ಮಾತ್ರವೇ ನೆಲಸು." ಎಂದು ಬುದ್ಧಿಹೇಳುತ್ತಿರುವಷ್ಟರಲ್ಲಿ ಆ ಘಾತುಕರು ಶೂಲಾರೋಹಣಕ್ಕೆ ಚಂದನದಾಸನನ್ನು ತ್ವರೆಪಡಿಸುತ್ತಿದ್ದರು. ಅವನ ಪತ್ನೀಪುತ್ರರು ರೋದನ ಮಾಡುತ್ತ ಚಂದನದಾಸನನ್ನು ಉಳಿಸಿ ತಮ್ಮನ್ನು ರಕ್ಷಿಸಬೇಕೆಂದು ಎಷ್ಟು ಬಗೆಯಿಂದ ಅವರನ್ನು ಬೇಡಿಕೊಂಡರೂ ಪ್ರಯೋಜನವಾಗಲಿಲ್ಲ. ಆ ಚಂಡಾ ಲರು ಅವರನ್ನು ಗದರಿಸಿ ದೂರ ತಳ್ಳಿದರು. ಚಂದನದಾಸನ ಪತ್ನಿಯು ನೆಲ ದಲ್ಲಿ ಉರುಳಿ ಹೋ ! ಎಂದು ಏಕಪ್ರಕಾರ ಗೋಳಿಡುತ್ತಿದ್ದಳು.

ಆಗ ಅಮಾತ್ಯರಾಕ್ಷಸನು ಆ ರೋದನವನ್ನು ಕೇಳಿ ಅತಿವೇಗದಿಂದ ಬರುತ್ತಾ "ತಾಯೀ, ಹೆದರಬೇಡಿ. ಇನ್ನು ದುಃಖವನ್ನು ಬಿಡಿ. ನಿಮ್ಮ ಪತಿ ಯನ್ನು ಬಿಡಿಸಿ ಕಳುಹಿಸುವೆನು." ಎಂದು ಕೂಗುತ್ತಾ ಶೂಲದ ಬಳಿಗೆ ಬಂದನು.

"ಎಲೈ ಘಾತುಕರಿರಾ, ಈ ಚಂದನದಾಸನು ನಿರಪರಾಧಿಯು; ಇವನಿಗೆ ನನ್ನ ನಿಮಿತ್ತವಾಗಿ ಈ ವಿಪತ್ತು ಸಂಭವಿಸಿರುವುದು. ನಾನೇ ಇಲ್ಲಿಗೆ ಬಂದಿರು ವಾಗ ಈತನನ್ನು ಬಿಡುಗಡೆ ಮಾಡಿ ನನ್ನನ್ನು ಶೂಲಕ್ಕೇರಿಸಿ. ಇಗೋ ನಾನು ಸಿದ್ಧನಾಗಿರುವೆನು." ಎಂದು ರಾಕ್ಷಸನು ಹೇಳಿದನು.

ಆಗ ಚಂದನದಾಸನು ರಾಕ್ಷಸನ ಮಾತನ್ನು ಕೇಳಿ "ಅಮಾತ್ಯಶ್ರೇಷ್ಠರೆ, ತಾವು ಈಗ ಇಲ್ಲಿಗೇಕೆ ಬಂದಿರಿ ? ತಮ್ಮ ಮಹಾಪ್ರಯತ್ನಗಳನ್ನೆಲ್ಲಾ ತೊರೆದು ನನಗಾಗಿ ಇಲ್ಲಿಗೆ ಬರುವುದುಂಟೆ ? ಸತ್ತರೆ ನಾನೊಬ್ಬನು ಸಾಯು ವೆನು. ತಮ್ಮಿಂದ ಬಹುಜನರ ರಕ್ಷಣೆಯಾಗಬೇಕಾಗಿದೆ. ತಮ್ಮ ಸಾಹಸವು ವ್ಯರ್ಥವಾಗಬಾರದು," ಎಂದು ಹೇಳಿ ವ್ಯಸನಪಡುತ್ತಿದ್ದನು.

"ಚಂದನದಾಸ, ಇನ್ನು ನನ್ನ ವಿಷಯವಾಗಿ ಚಿಂತಿಸಬೇಡ. ನೀನು ಮಾಡಿರುವ ಉಪಕಾರವನ್ನು ನಾನು ತೀರಿಸಲು ಸಾಧ್ಯವೆ? ಈಗ ನಿನಗಾಗಿ ಪರಿತಪಿಸುತ್ತಿರುವ ನಿನ್ನ ಹೆಂಡತಿ ಮಕ್ಕಳ ಕ್ಷೇಮವನ್ನು ನೋಡುಹೋಗು."

ಎಂದು ಹೇಳಿ ಅಮಾತ್ಯನು ಆ ಘಾತುಕರಿಗೆ 'ನಿರ್ದೋಷಿಯಾದ ಚಂದನ ದಾಸನನ್ನು ಉಳಿಸಿ ನನಗೆ ಆ ಶಿಕ್ಷೆಯನ್ನು ವಿಧಿಸಿರಿ. ರಾಕ್ಷಸನು ಶೂಲಾ ರೋಹಣಕ್ಕೆ ಸಿದ್ಧನಾಗಿ ನಿಂತಿರುವುದನ್ನು ಚಂದ್ರಗುಪ್ತಚಾಣಕ್ಯರಿಗೆ ತಿಳಿಸಿರಿ.' ಎಂದು ನುಡಿದನು.

ಅದಕ್ಕೆ ಆ ಘಾತುಕರು—ಅಮಾತ್ಯರೆ, ಪ್ರಭುಗಳ ಅಪ್ಪಣೆಯಿಲ್ಲದೆ ನಾವು ಚಂದನದಾಸನನ್ನು ಬಿಡಲು ಸಾಧ್ಯವಿಲ್ಲ. ಹಾಗೆಯೇ ತಾವೂ ಶೂಲಾ ರೋಹಣ ಮಾಡಕೂಡದು. ನಿಮ್ಮ ಸ್ನೇಹಿತನನ್ನು ಉಳಿಸಬೇಕೆಂದು ಬಯಸುವಿರಾದರೆ ನೀವೇ ಚಾಣಕ್ಯರ ಬಳಿಗೆ ಹೋಗಿ ಅವರ ಅಪ್ಪಣೆಯನ್ನು ತೆಗೆದುಕೊಂಡು ಬನ್ನಿ. ಅಲ್ಲಿಯವರೆಗೆ ನಾವು ಈ ವಧೆಯ ಕಾರ್ಯವನ್ನು ತಡೆ ದಿರುವೆವು. ಬೇಕಾದರೆ ಮಾರ್ಗತೋರಿಸಲು ನಾವೂ ನಿಮ್ಮೊಡನೆ ಬರುವೆವು—ಎಂದು ಹೇಳಲು ಆ ಮಾತಿಗೆ ರಾಕ್ಷಸನು ಒಡಂಬಟ್ಟು ಪತ್ನೀಪುತ್ರಸಮೇತ ನಾದ ಚಂದನದಾಸನನ್ನು ಮರದನೆರಳಿನಲ್ಲಿ ಕುಳ್ಳಿರಿಸುವಂತೆ ಹೇಳಿ, ಚಾಣ ಕ್ಯನ ಪರ್ಣಶಾಲೆಯ ಬಳಿಗೆ ಆ ಘಾತುಕರೊಡನೆ ಹೋದನು. ಘಾತುಕರು ಪರ್ಣಶಾಲೆಯ ಬಳಿಯಿದ್ದ ಶಿಷ್ಯನಿಗೆ 'ಅಮಾತ್ಯರು ತಮ್ಮ ದರ್ಶನಕ್ಕಾಗಿ ಬಂದಿದ್ದಾರೆಂದು ನಿಮ್ಮ ಗುರುಗಳಿಗೆ ತಿಳಿಸಿರಿ.' ಎಂದು ಹೇಳಲು ಅವನು ಒಳಗೆ ಪ್ರವೇಶಿಸಿ ಚಾಣಕ್ಯನಿಗೆ ಆ ಸಂಗತಿಯನ್ನು ತಿಳಿಸಿದನು.

ಚಾಣಕ್ಯನು ಕಂಡಿಯಿಂದಲೇ ರಾಕ್ಷಸನನ್ನು ಕಂಡು ತನ್ನ ಸಂಕಲ್ಪ ಕೈಗೂಡಿತೆಂದು ಸಂತೋಷಗೊಂಡು ಹೊರಗೆ ಬಂದನು. ಘಾತುಕರನ್ನು 'ನೀವು ಮಹಾಸಾಹಸಿಯೂ ನೀತಿಶಾಸ್ತ್ರಕೋವಿದನೂ ಪ್ರಜ್ಞಾವಂತನೂ ಆದ ಮಹಾ ಪುರುಷನಾದ ಅಮಾತ್ಯನನ್ನು ಇಲ್ಲಿಗೆ ಹೇಗೆ ಕರೆತಂದಿರಿ?' ಎಂದು ಪ್ರಶ್ನಿ ಸಿದನು. ಅದಕ್ಕೆ ಅವರು—ಆಚಾರ್ಯರೆ, ಈ ಸಾಹಸಕಾರ್ಯವು ತಮ್ಮ ಅಸ ಮಾನ ನೀತಿಕೌಶಲ್ಯಬಲದಿಂದ ಸಾಧ್ಯವಾಯಿತಲ್ಲದೆ ಬೇರೆ ಯಾರು ತಾನೆ ಶಕ್ಯರಾದರು?—ಎಂದು ಉತ್ತರವಿತ್ತರು. ಅದಕ್ಕೆ ಚಾಣಕ್ಯನು—ಹಾಗಲ್ಲ; ನಂದವಿದ್ವೇಷಿಯಾದ ದೈವವೇ ಇಲ್ಲಿಗೆ ಕರೆತಂದಿತೆಂದು ತಿಳಿಯಬೇಕು—ಎಂದು ಹೇಳಿದನು.

ಚಾಣಕ್ಯನನ್ನು ಕಂಡೊಡನೆ ಅಮಾತ್ಯನಿಗೆ ಅವನ ಮೇಲಿದ್ದ ಆಕ್ರೋಶ ವೆಲ್ಲಾ ಮಾಯವಾಯಿತು. ಮಹಾತ್ಮರ ದರ್ಶನವು ಎಂಥ ಕ್ರೂರಮನಸ್ಸ ನ್ನಾದರೂ ಪರಿವರ್ತಿಸಬಲ್ಲುದೆಂಬುದಕ್ಕೆ ಅದೊಂದು ನಿದರ್ಶನವಾಗಿ ಕಂಡಿತು.

ಅಮಾತ್ಯನು ಮನಸ್ಸಿನಲ್ಲಿ 'ಈತನ ದಿವ್ಯತೇಜಸ್ಸನ್ನು ನೋಡಿದರೆ ಮಹಾಪುರುಷನೆಂಬುದರಲ್ಲಿ ಅಡ್ಡಿಯಿಲ್ಲ. ತನಗೆ ಸರ್ವಾಧಿಕಾರ ಸಂಪತ್ತಿದ್ದರೂ ವಿರಕ್ತನಾಗಿ ಈ ಪರ್ಣಶಾಲೆಯಲ್ಲಿರುವುದನ್ನು ನೋಡಿದರೆ ಈತನಿಗೆ ಸ್ವಾರ್ಥವು ಸ್ವಲ್ಪವೂ ಇದ್ದಂತೆ ತೋರುವುದಿಲ್ಲ. ಈತನು ಧರ್ಮಪಕ್ಷಪಾತಿಯಾದುದರಿಂದಲೇ ಚಂದ್ರಗುಪ್ತನಿಗೆ ಈತನ ಸಹಾಯ ದೊರಕಿತು. ಇಂಥ ಮಹಾತ್ಮನನ್ನು ಅಪಮಾನಗೊಳಿಸಿ ನಂದರು ತಮ್ಮ ಮೃತ್ಯುವನ್ನು ತಾವೇ ತಂದುಕೊಂಡರು. ಈತನೊಡನೆ ದ್ವೇಷ ಸಾಧಿಸುವುದೂ ಮೃತ್ಯುವಿನೊಡನೆ ಸರಸವಾಡುವುದೂ ಎರಡೂ ಒಂದೇ. ಈತನ ತಂತ್ರಗಳನ್ನು ಭೇದಿಸುವುದು ಯಾರಿಗೂ ಶಕ್ಯವಲ್ಲ. ಈತನ ಮುಂದೆ ನಾನೆಷ್ಟರವನು! ಕೇವಲ ಮಾತ್ಸರ್ಯದಿಂದ ಈತನಲ್ಲಿ ದೋಷಾರೋಪಣೆ ಮಾಡುವುದು ಸರಿಯಲ್ಲ. ಈತನನ್ನು ಪ್ರಾರ್ಥಿಸಿ ಚಂದನದಾಸನಿಗೆ ಬಿಡುಗಡೆಯನ್ನುಂಟುಮಾಡಿ ಆತನಿಗೆ ವಿಧಿಸಿರುವ ಶಿಕ್ಷೆಯನ್ನು ನಾನು ಹೊಂದಿ ಧನ್ಯನಾಗುವೆನು.' ಎಂದು ಯೋಚಿಸುತ್ತಿದ್ದನು.

ಆಗ ಚಾಣಕ್ಯನು ಅಮಾತ್ಯನ ಸಮೀಪಕ್ಕೆ ಬಂದು 'ಅಮಾತ್ಯರಾಕ್ಷಸರೆ, ಚಣಕಸುತನೂ ವಿಷ್ಣುಶರ್ಮನಾಮಕನೂ ಆದ ನಾನು ನಿಮಗೆ ನಮಸ್ಕರಿಸುವೆನು.' ಎಂದು ನುಡಿದನು.

"ಮಹಾತ್ಮರಾದ ವಿಷ್ಣುಶರ್ಮರೆ, ಚಂಡಾಲಪರಿವಾರದಿಂದ ದೂಷಿತನಾಗಿರುವ ನನಗೆ ತಮ್ಮಂಥ ಜ್ಞಾನಿಗಳು ನಮಸ್ಕರಿಸುವುದುಂಟೆ?" ಎಂದು ಅಮಾತ್ಯನು ಹೇಳಿದನು.

"ಅಮಾತ್ಯರೆ, ತಮ್ಮ ಸಂಗಡ ಬಂದಿರುವವರು ಚಂಡಾಲರಲ್ಲ. ಘಾತುಕವೇಷಧಾರಿಗಳು."

"ಸ್ವಾಮಿ, ಹಾಗಾದರೆ ನಾನು ದೂಷಿತನಾಗಲಿಲ್ಲ. ಬ್ರಾಹ್ಮಣೋತ್ತಮರಾದ ತಮಗೆ ಸಾಷ್ಟಾಂಗನಮಸ್ಕಾರ ಮಾಡುವೆನು. ಇವರು ಯಾರು?"

"ಮಂತ್ರಿಶ್ರೇಷ್ಠರೆ, ಈತನು ನಿಮ್ಮ ಬಳಿಯಲ್ಲಿ ಸೇರಿದ್ದ ಸಿದ್ಧಾರ್ಥಕನು. ಮತ್ತೊಬ್ಬನು ಸಮಿದ್ಧಾರ್ಥಕನು. ನಿಮ್ಮ ರಾಯಸದ ಶಕಟದಾಸನನ್ನು ವಂಚಿಸಿ ಸಿದ್ಧಾರ್ಥಕನೇ ಕಾಗದವನ್ನು ಬರೆಸಿದವನು. ನಿಮ್ಮ ಮಿತ್ರನಾಗಿದ್ದ ಕ್ಷಪಣಕನೇ ನನ್ನ ಸಹಾಧ್ಯಾಯಿ ಇಂದುಶರ್ಮನು. ಬಾಗುರಾಯಣಾದಿಗಳು ನಮ್ಮ ಕಡೆಯವರೇ. ಆಭರಣಗಳನ್ನು ನಾನೇ ನಿಮ್ಮ ಬಳಿಗೆ ವರ್ತಕರು

ಮೂಲಕ ಕಳುಹಿಸಿದೆ. ನಂದರನ್ನು ವಂಚಿಸಿದ ಮಾಸೋಪವಾಸಿಯು ಇಂದು ಶರ್ಮನ ಶಿಷ್ಯ. ಉದ್ಯಾನದಲ್ಲಿ ನೇಣುಹಾಕಿಕೊಳ್ಳುವಂತೆ ನಟಿಸಿದವನು ಪಶುಲೋಮನೆಂಬ ನನ್ನ ಶಿಷ್ಯ. ನಿಮ್ಮನ್ನು ಸಂಗ್ರಹಿಸಿ, ಸನ್ಮಾರ್ಗಿಯಾದ ಚಂದ್ರಗುಪ್ತನಿಗೆ ಮಂತ್ರಿಯನ್ನಾಗಿ ನಿಲ್ಲಿಸಿ, ನಾನು ತಪೋವನಕ್ಕೆ ತೆರಳಬೇಕೆಂದು ಈ ಕಪಟತಂತ್ರವನ್ನಾಚರಿಸಬೇಕಾಯ್ತು. ನಿಮ್ಮ ಮೇಲೆ ನನಗೆ ದ್ವೇಷವಿಲ್ಲ.'' ಎಂದು ತಿಳಿಸಿ ಅಮಾತ್ಯನ ಕೈಹಿಡಿದು ಪರ್ಣಶಾಲೆಯೊಳಕ್ಕೆ ಕರೆದುಕೊಂಡು ಹೋದನು. ಆತನನ್ನು ವೇತ್ರಾಸನದಲ್ಲಿ ಕುಳ್ಳಿರಿಸಿ ತಾನು ದರ್ಭಾಸನದಲ್ಲಿ ಕುಳಿತು ಮತ್ತೆ ಸಂಭಾಷಿಸತೊಡಗಿದನು.

"ಅಮಾತ್ಯರೆ, ನಾನು ಈಗ ನಿಮ್ಮಲ್ಲಿ ವಂಚನೆಯಿಲ್ಲದೆ ಸತ್ಯವಾಗಿ ಈ ಮಾತುಗಳನ್ನು ಹೇಳುತ್ತಿದ್ದೇನೆ. ನಾನು ಹೇಳುವ ಮಾತು ಸತ್ಯವೋ ಕಪಟವೊ? ನೀವೇ ಯೋಚಿಸಿ ನಿಮ್ಮ ಮನಸ್ಸಿಗೆ ಯಥಾರ್ಥವಾಗಿ ತೋರಿದರೆ ಆ ಪ್ರಕಾರ ನಡೆಸಬಹುದು. ನನ್ನ ಗುರುಗಳು ದಂಡನೀತಿ ಶಾಸ್ತ್ರವನ್ನು ನನಗೆ ಚೆನ್ನಾಗಿ ಬೋಧಿಸಿ, ಲೋಕದಲ್ಲಿ ನಡೆಯುವ ಅಧರ್ಮವನ್ನು ಕಳೆದು ಧರ್ಮ ಸಂರಕ್ಷಣೆ ಮಾಡಿದರೆ ಗುರುದಕ್ಷಿಣೆಯನ್ನು ಸಮರ್ಪಿಸಿದಂತಾಗುವುದೆಂದು ಆಜ್ಞೆ ಮಾಡಿದ್ದರು. ಅಧರ್ಮಪ್ರವರ್ತಕರಾದುದರಿಂದಲೇ ನಂದರೂ ಪರ್ವತ ರಾಜನೂ ಮೃತರಾದರು. ಗುರುವಚನಾನುಸಾರ ನನ್ನ ಕರ್ತವ್ಯವನ್ನು ನಾನು ಮಾಡಿದೆ. ಇನ್ನು ನೀವು ಮಂತ್ರೀಪದವಿಯನ್ನು ಸ್ವೀಕರಿಸಿ ದುಷ್ಟ ಶಿಕ್ಷಣ ಶಿಷ್ಟ ರಕ್ಷಣಕಾರ್ಯಗಳನ್ನು ಮಾಡಿ ಧರ್ಮವನ್ನು ಪಾಲಿಸಿರಿ. ನಾನು ಗುರುಸನ್ನಿಧಿಗೆ ತೆರಳಲು ಅಪ್ಪಣೆ ಕೊಡಿ." ಎಂದು ಚಾಣಕ್ಯನು ಅಮಾತ್ಯನನ್ನು ಪ್ರಾರ್ಥಿಸಿ ಕೊಂಡನು.

ಬಳಿಕ ಚಂದ್ರಗುಪ್ತನಿಗೆ 'ರಾಜಕುಮಾರ, ನಿನ್ನ ಪುಣ್ಯವಶದಿಂದ ಅಮಾತ್ಯರು ನಿನಗೆ ಲಭ್ಯವಾಗಿದ್ದಾರೆ. ಅವರಿಗೆ ಮಂತ್ರಿ ಪ್ರಾಧಾನ್ಯಶಸ್ತ್ರವನ್ನು ಸಮರ್ಪಿಸಿ ತಂದೆಗೆ ಮಗನೂ ಗುರುವಿಗೆ ಶಿಷ್ಯನೂ ಹೇಗೆ ವಿಧೇಯರಾಗಿರುವರೋ ಹಾಗೆ ಇದ್ದುಕೊಂಡು ಸಾಮ್ರಾಜ್ಯ ಸುಖವನ್ನನುಭವಿಸುತ್ತ ಧರ್ಮಜ್ಞನಾಗಿ ಬಾಳು,' ಎಂದು ಹೇಳಿದನು. ಚಂದ್ರಗುಪ್ತನು ಚಾಣಕ್ಯರ ಮಾತನ್ನು ವೇದವಾಕ್ಯವೆಂದು ತಿಳಿದು ಅದರಂತೆ ನಡೆದುಕೊಳ್ಳುವೆನೆಂದು ತಿಳಿಸಿ ಕೂಡಲೆ ಪ್ರಾಧಾನ್ಯಶಸ್ತ್ರವನ್ನೂ ಅನರ್ಘ್ಯವಸ್ತ್ರಭೂಷಣಾದಿಗಳನ್ನೂ ತರಿಸಿ ಅಮಾತ್ಯರಾಕ್ಷಸನ ಮುಂದಿರಿಸಿ ಅವರಿಗೆ ಸಾಷ್ಟಾಂಗ ನಮಸ್ಕಾರ

ಮಾಡಿದನು. ಆಗ ಅಮಾತ್ಯನು 'ಅರಸೆ, ಚಿರಂಜೀವಿಯಾಗಿ ಕೀರ್ತಿಶಾಲಿಯಾಗಿ ಬಾಳು.' ಎಂದು ಆಶೀರ್ವದಿಸಿ ಅವುಗಳನ್ನು ಸ್ವೀಕರಿಸದೆ ಇದ್ದನು.

ಅದನ್ನು ಕಂಡು ಚಾಣಕ್ಯನು 'ಅಮಾತ್ಯರೆ, ಚಂದ್ರಗುಪ್ತನು ಸರ್ವಾರ್ಥಸಿದ್ಧಿರಾಜನ ಪೌತ್ರನೆಂಬ ಅಭಿಮಾನದಿಂದ ಅವನನ್ನು ನೋಡಲು ಬಂದಿರೋ? ಅಥವಾ ಚಂದನದಾಸನಿಗೆ ಒಳ್ಳೆಯದನ್ನು ಬಯಸುವುದಕ್ಕಾಗಿಯೇ ಬಂದಿರೋ? ಎಂದು ಪ್ರಶ್ನಿಸಿದನು. ಅದಕ್ಕೆ ಅಮಾತ್ಯನು 'ತಪೋಧನರೆ, ತಮ್ಮ ದರ್ಶನವಾದ ಬಳಿಕ ಚಂದನದಾಸನಿಗೆ ಕ್ಷೇಮವುಂಟಾಗದೆ ಇರುವುದೆ?' ಎಂದು ಉತ್ತರ ಕೊಟ್ಟನು. ಚಾಣಕ್ಯನು 'ಅಮಾತ್ಯರೆ, ನಿಮಗೆ ಅಭಿಮತವಿದ್ದ ಪಕ್ಷದಲ್ಲಿ ಚಂದ್ರಗುಪ್ತನನ್ನು ಅನುಗ್ರಹಿಸಿ ಮಂತ್ರಿಪದವಿಯನ್ನು ಸ್ವೀಕರಿಸಿದರೆ ಮಿತ್ರನಾದ ಚಂದನದಾಸನಿಗೆ ಕ್ಷೇಮವುಂಟಾಗುವುದು.' ಎಂದು ಹೇಳಿದನು.

ಅಮಾತ್ಯರಾಕ್ಷಸನು ತನ್ನ ಮನಸ್ಸಿನಲ್ಲಿ 'ಚಂದನದಾಸನ ಕ್ಷೇಮಕ್ಕಾಗಿ ಈಗ ನಾನು ನಂದವೈರಿಯಾದ ಚಂದ್ರಗುಪ್ತನನ್ನು ಸೇವಿಸಬೇಕಾಗಿ ಬಂದಿದೆ. ಇದೆಲ್ಲಾ ದೈವಸಂಕಲ್ಪವೆಂದು ತೋರುತ್ತಿದೆ' ಎಂದು ಭಾವಿಸಿ ಚಾಣಕ್ಯನಿಗೆ 'ಸ್ವಾಮಿ, ತಮ್ಮ ಸೂನೃತವಾಕ್ಯಗಳನ್ನು ಕೇಳಿ ನನ್ನ ಮನಃಕಲ್ಮಷವೆಲ್ಲವೂ ಕಳೆದುಹೋಯಿತು. ಲೋಕದಲ್ಲಿ ಎಲ್ಲಾ ಕಾರ್ಯಗಳಿಗಿಂತಲೂ ಮಿತ್ರಕ್ಷೇಮಲಾಭವೇ ಅತಿಶಯವಾದುದು. ಈಗ ಅದಕ್ಕಾಗಿ ನಾನು ನೀವು ಹೇಳಿದಂತೆ ಪ್ರಾಧಾನ್ಯಶಸ್ತ್ರವನ್ನು ಸ್ವೀಕರಿಸಲು ಒಪ್ಪಿರುವೆನು.' ಎಂದು ತಿಳಿಸಿದನು. ಚಂದ್ರಗುಪ್ತನು ಚಾಣಕ್ಯನ ಅಪ್ಪಣೆಯಂತೆ ತನ್ನ ಹಸ್ತದಿಂದಲೇ ಪ್ರಾಧಾನ್ಯಶಸ್ತ್ರವನ್ನು ಅಮಾತ್ಯರಾಕ್ಷಸನಿಗೆ ಅರ್ಪಿಸಿದನು. ಎಲ್ಲರೂ ಸಂತೋಷದಿಂದ ಜಯಕಾರಮಾಡಿದರು. ಮಂಗಳವಾದ್ಯಗಳು ಮೊಳಗಿದುವು. ಚಾಣಕ್ಯನ ಅಭೀಷ್ಟ ನೆರವೇರಿತು. ಚಂದ್ರಗುಪ್ತನ ಭಾಗ್ಯ ಸಿದ್ಧಿಸಿತು.

ಅಷ್ಟರಲ್ಲಿ ಭದ್ರಭಟಾದಿಗಳು ಮಲಯಕೇತುವನ್ನು ಕೈಸೆರೆಯಿಂದ ತೆಗೆದುಕೊಂಡು ಬಂದು ಪುರದ ಬಾಗಿಲಲ್ಲಿ ನಿಂತಿದ್ದಾರೆಂಬ ಸಮಾಚಾರ ಬಂದಿತು. ಅದನ್ನು ಕೇಳಿ ಚಾಣಕ್ಯನು ಅಮಾತ್ಯನಿಗೆ 'ಮಲಯಕೇತುವಿನ ವಿಷಯದಲ್ಲಿ ಚಂದ್ರಗುಪ್ತನು ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸಿರಿ.' ಎಂದು ಹೇಳಲು ಅಮಾತ್ಯನು—ರಾಜಕುಮಾರ, ಈ ಮಲಯಕೇತುವಿನ ತಂದೆ ಪರ್ವತೇಶ್ವರನು ಆರ್ಯ ಚಾಣಕ್ಯರ ಮಾತಿನಂತೆ ನಿನಗೆ ಸಹಾಯ ಮಾಡಿದು

ದರಿಂದಲೂ ನನಗೆ ಪೂರ್ವ ಮಿತ್ರನಾದ್ದರಿಂದಲೂ ಅಲ್ಲದೆ ಮಲಯಕೇತುವು ನನ್ನನ್ನು ಸನ್ಮಾನಿಸಿ ರಕ್ಷಿಸಿದ್ದರಿಂದಲೂ ಈತನನ್ನು ಸನ್ಮಾನಿಸುವುದು ಯೋಗ್ಯ—ಎಂದು ತಿಳಿಸಿದನು. ಚಂದ್ರಗುಪ್ತನು ಅದಕ್ಕೆ ಒಪ್ಪಿ ಚಾಣಕ್ಯ ಅಮಾತ್ಯರೊಡನೆ ಪರಿವಾರ ಸಮೇತನಾಗಿ ಸಂಭ್ರಮದಿಂದ ಮಲಯಕೇತುವನ್ನು ಎದುರುಗೊಳ್ಳಲು ಹೊರಟನು. ಅವರು ತನ್ನನ್ನು ಸ್ವಾಗತಿಸಲು ಬರುತ್ತಿರುವುದನ್ನು ಕೇಳಿ ಮಲಯಕೇತುವು ಆಶ್ಚರ್ಯವನ್ನೂ ಸಂತೋಷವನ್ನೂ ಹೊಂದಿದನು. ಅವರು ತನ್ನ ಬಳಿಗೆ ವಾಹನಗಳಿಂದಿಳಿದು ಕಾಲುನಡಿಗೆಯಲ್ಲಿ ಬರುತ್ತಿರುವುದನ್ನು ಅವನು ಕಂಡು ಅವರ ಬಳಿಗೆ ಬಂದು ಚಾಣಕ್ಯ ಅಮಾತ್ಯರಿಗೆ ಸಾಷ್ಟಾಂಗಪ್ರಣಾಮಮಾಡಿ, ಚಂದ್ರಗುಪ್ತನನ್ನು ಪ್ರೀತಿಯಿಂದ ಆಲಿಂಗಿಸಿದನು. ಎಲ್ಲರೂ ಸಂತೋಷ ಹೊಂದಿದವರಾಗಿ ಅಲ್ಲಿಂದ ಆಸ್ಥಾನಕ್ಕೆ ಬಂದು ಅಲ್ಲಿ ಯೋಗ್ಯಪೀಠಗಳನ್ನು ಅಲಂಕರಿಸಿದರು.

ಆಗ ಚಾಣಕ್ಯನು 'ಚಂದ್ರಗುಪ್ತನೆ, ಈ ಕಲಿಯುಗದಲ್ಲಿ ಮಿತ್ರಶ್ರೇಷ್ಠನಾದ ಚಂದನದಾಸನಿಗೆ ಸಮಾನನಾದ ಪುರುಷನು ಹಿಂದೆ ಹುಟ್ಟಲಿಲ್ಲ; ಈಗಲೂ ಇಲ್ಲ; ಮುಂದೆ ಹುಟ್ಟುವುದೂ ಇಲ್ಲ. ಸ್ನೇಹಿತನಿಗಾಗಿ ಪ್ರಾಣವನ್ನು ತೃಣಕ್ಕೆಣೆಯಾಗಿ ಭಾವಿಸುವವರು ಯಾರುಂಟು? ಈತನನ್ನು ಸನ್ಮಾನದಿಂದ ಸಭೆಗೆ ಕರೆಸಿ ಬಹುಮರ್ಯಾದೆಯನ್ನು ಮಾಡು.' ಎಂದು ಹೇಳಿದನು. ಚಂದ್ರಗುಪ್ತನು ಆ ಮಾತನ್ನು ಶಿರಸಾವಹಿಸಿ ದೂತರಿಗೆ 'ಚಂದನದಾಸನನ್ನು ವಧ್ಯಸ್ಥಾನದಿಂದ ಕರೆತಂದು ಮಂಗಳಸ್ನಾನಮಾಡಿಸಿ ಅನರ್ಘ್ಯವಸ್ತ್ರಭೂಷಣಗಂಧಮಾಲ್ಯಾದಿಗಳಿಂದ ಅಲಂಕರಿಸಿ ಆನೆಯ ಮೇಲೆ ಅಂಬಾರಿಯಲ್ಲಿ ಕೂಡಿಸಿ ಸಕಲ ರಾಜಮರ್ಯಾದೆಗಳೊಡನೆ ಆತನ ಸದ್ಗುಣಗಳನ್ನು ಹೊಗಳಿಸುತ್ತ ಬಹುಸಂಭ್ರಮದಿಂದ ಆಸ್ಥಾನಕ್ಕೆ ಕರೆತನ್ನಿ.' ಎಂದು ಆಜ್ಞಾಪಿಸಿದನು. ದೂತರು ಅದೇ ಪ್ರಕಾರ ಕರೆತಂದರು.

ಚಂದನದಾಸನು ಚಾಣಕ್ಯ ಅಮಾತ್ಯರಿಗೂ ಚಂದ್ರಗುಪ್ತನಿಗೂ ಪ್ರಣಾಮಮಾಡಿದನು. ಚಂದ್ರಗುಪ್ತನು ಅವನನ್ನು ಆಲಿಂಗಿಸಿ ಉಚಿತಪೀಠದಲ್ಲಿ ಕುಳ್ಳಿರಿಸಿದನು. ಆಗ ಚಾಣಕ್ಯನು 'ವರ್ತಕಶ್ರೇಷ್ಠನೆ, ನಿನಗೆ ಆಚಂದ್ರಾರ್ಕವಾದ ಕೀರ್ತಿಯುಂಟಾಯಿತು. ಅಮಾತ್ಯರನ್ನು ಇಲ್ಲಿಗೆ ಬರಮಾಡಿಕೊಳ್ಳುವುದಕ್ಕಾಗಿ ನಿನಗೆ ತೊಂದರೆಕೊಟ್ಟೆವಲ್ಲದೆ ಅನ್ಯಥಾ ಇಲ್ಲ.' ಎಂದು ಹೇಳಿ ವಶಪಡಿಸಿ

ಕೊಂಡಿದ್ದ ಅವನ ಮನೆಯ ವಸ್ತುಗಳನ್ನು ಕೊಡಿಸಿದ್ದಲ್ಲದೆ ಅದಕ್ಕೆ ನೂರರಷ್ಟು ಅಮೂಲ್ಯ ರತ್ನಾಭರಣಗಳನ್ನು ಕೊಡಿಸಿ, ಅವನಿಗೆ ಕನಕಾಭಿಷೇಕ ಮಾಡಿಸಿ, ಆನೆಯ ಮೇಲೆ ಕೂಡಿಸಿ ಅವನ ಮನೆಗೆ ಕಳುಹಿಸಿಕೊಟ್ಟನು. ಮಲಯಕೇತುವನ್ನೂ ರಾಜಯೋಗ್ಯವಾದ ಬಿಡಾರಕ್ಕೆ ಕಳುಹಿಸಿದರು.

## ಪಟ್ಟಾಭಿಷೇಕ

ಬಳಿಕ ಅಮಾತ್ಯನಿಗೆ 'ಸಚಿವರೆ, ಚಂದ್ರಗುಪ್ತನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಸಂಕಲ್ಪಮಾಡಿ ಅದನ್ನು ನಿಲ್ಲಿಸಿದ್ದಿತು. ಶುಭ ಮುಹೂರ್ತದಲ್ಲಿ ಮೂರ್ಧಾಭಿಷೇಕವನ್ನು ಮಾಡಿಸಿದರೆ ಅದನ್ನು ನೋಡಿ ಸಂತೋಷಿಸಿ ನಾನು ತಪಸ್ಸಿಗೆ ತೆರಳುವೆನು.' ಎಂದು ತಿಳಿಸಿ ತನ್ನ ಪರ್ಣಶಾಲೆಗೆ ಶಿಷ್ಯರೊಡನೆ ತೆರಳಿದನು. ಚಂದ್ರಗುಪ್ತನು ಅಂತಃಪುರವನ್ನು ಪ್ರವೇಶಿಸಿದನು.

ಅಮಾತ್ಯರಾಕ್ಷಸನು ಚಾಣಕ್ಯನ ಅಭಿಮತದಂತೆ ಚಂದ್ರಗುಪ್ತನ ಪಟ್ಟಾಭಿಷೇಕಕ್ಕಾಗಿ ಶುಭ ದಿನ ಮುಹೂರ್ತವನ್ನು ಗೊತ್ತುಮಾಡಿದನು. ಪಟ್ಟಣವನ್ನು ಶೃಂಗರಿಸುವಂತೆ ಅಧಿಕಾರಿಗೆ ಆಜ್ಞೆಮಾಡಿದನು. ಪುಣ್ಯತೀರ್ಥಗಳನ್ನು ತರಿಸಿ ಛತ್ರಚಾಮರ ಮೊದಲಾದ ಪಟ್ಟಾಭಿಷೇಕಕ್ಕೆ ಬೇಕಾಗುವ ಪದಾರ್ಥಗಳನ್ನೆಲ್ಲಾ ಸಿದ್ಧಪಡಿಸುವಂತೆ ಬಾಗುರಾಯಣನಿಗೆ ತಿಳಿಸಿದನು. ಸಾಮಂತ ಅರಸರು ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಅಭಿಷೇಕಸಮಯಕ್ಕೆ ಬರುವಂತೆ ಅವರಿಗೆ ಲೇಖನಗಳನ್ನು ಬರೆಯಿಸಿ ಕಳುಹಿಸಿದನು. ಆಶ್ರಿತವಿದ್ವಜ್ಜನರಿಗೂ ಅಧಿಕಾರಿಗಳಿಗೂ ಉಚಿತವರಿತು ವಸ್ತ್ರಭೂಷಣಗಳನ್ನುಕೊಡುವಂತೆ ಕೋಶಾಧ್ಯಕ್ಷನಿಗೆ ಅನುಮತಿಯಿತ್ತನು. ಭೂಸುರರಿಗೆ ಮೃಷ್ಟಾನ್ನಭೋಜನ ಭೂರಿದಕ್ಷಿಣೆಗಳೂ ದೀನಾನಾಥರಿಗೆ ಅನ್ನವಸ್ತ್ರಗಳೂ ಸೈನಿಕರಿಗೆ ಬಹುಮಾನಗಳೂ ದೊರಕುವಂತೆ ಏರ್ಪಾಡುಮಾಡಿದನು. ತಾನು ಎಲ್ಲ ಮೇಲ್ವಿಚಾರಣೆಗಳನ್ನೂ ನೋಡುತ್ತ ಅಭಿಷೇಕಕಾರ್ಯತತ್ಪರನಾಗಿದ್ದನು.

ಅಮಾತ್ಯರಾಕ್ಷಸನ ಆಜ್ಞೆಯಂತೆ ಚಂದ್ರಗುಪ್ತನ ಪಟ್ಟಾಭಿಷೇಕಕ್ಕಾಗಿ ಪಾಟಲೀಪುರವು ಶೃಂಗರಿಸಲ್ಪಟ್ಟು ಅಮರಾವತಿಯಂತೆ ಮಂಗಳಕರವಾಗಿ ಕಂಗೊಳಿಸುತ್ತಿತ್ತು. ಗಂಧೋದಕದ ಚಳೆಯಗಳಿಂದಲೂ ಕುರುಜುಮೇಲುಕಟ್ಟು

ಸಾಲುತೋರಣಗಳಿಂದಲೂ ಪುರದ ರಾಜಬೀದಿಗಳು ಕಂಗೊಳಿಸಿದುವು. ನಾಲ್ಕು ಕಡೆಗೂ ಕದಳೀಸ್ತಂಭಗಳನ್ನು ನಿಲ್ಲಿಸಿತಳಿರುತೋರಣ ಪೂಮಾಲೆಗಳಿಂದಲಂಕರಿಸಿ ಅಲ್ಲಿಗಲ್ಲಿಗೆ ಪುಷ್ಪಕುಂಡಗಳನ್ನಿರಿಸಿ ತೆಂಗುಕೌಂಗುಗರಿಗಳ ಮೇಲುಕಟ್ಟನ್ನು ಕಟ್ಟಿ ನಿರ್ಮಿಸಿದ ಹಸಿರುಚಪ್ಪರಗಳು ವಸಂತಲಕ್ಷ್ಮಿಯ ವಿಹಾರ ಮಂಟಪ ಗಳಂತೆ ಶೋಭಿಸುತ್ತಿದ್ದುವು. ಮುತ್ತೈದೆಯರು ಮುಂಜಾನೆ ಎದ್ದು ಬೀದಿಯ ಇಕ್ಕಡೆಗಳಲ್ಲೂ ಚಿತ್ರವಿಚಿತ್ರವಾದ ರಂಗವಲ್ಲಿಗಳನ್ನು ರಚಿಸಿ ಸುಗಂಧಪುಷ್ಪ ಮಾಲೆಗಳಿಂದ ಮಂದಿರಗಳನ್ನು ಶೃಂಗರಿಸಿದ್ದರು. ರಾಜವೈಭವಕ್ಕೆ ತಕ್ಕಂತೆ ಅಲಂಕೃತವಾದ ಅರಮನೆಯ ಮೇಲೆ ಧ್ವಜಪತಾಕೆಗಳು ಹಾರಾಡುತ್ತ ಪಟ್ಟಾಭಿಷೇಕಕ್ಕೆ ಎಲ್ಲರನ್ನೂ ಆಹ್ವಾನಿಸುವಂತಿದ್ದುವು. ದೇವಾಲಯಗಳಲ್ಲಿ ವಿಶೇಷ ಪೂಜೋತ್ಸವಗಳು ಪ್ರಾರಂಭವಾದುವು. ಪೌರರು ಆನಂದಭರಿತರಾಗಿ ಪಟ್ಟಾಭಿಷೇಕ ಮಹೋತ್ಸವವನ್ನು ಕಣ್ದಣಿಯೆ ನೋಡಲು ತವಕಿಸುತ್ತಿದ್ದರು. ಎಲ್ಲೆಲ್ಲೂ ಸಂತೋಷವೇ ತಾಂಡವವಾಡುತ್ತಿತ್ತು.

ಹೀಗೆ ಮಹೋತ್ಸವವು ನಡೆಯುತ್ತಿರಲು ಚಂದ್ರಗುಪ್ತನು ಪತ್ನೀಸಮೇತ ನಾಗಿ ಚಾಣಕ್ಯರ ಪಾದಪ್ರಕ್ಷಾಳನಮಾಡಿ ಯಥಾವಿಧಿಯಿಂದ ಪೂಜಿಸಿ ಅವರ ಅನಂತ ಆಶೀರ್ವಾದಗಳನ್ನು ಪಡೆದನು. ಅವರ ಅನುಮತಿಯಿಂದ ಮಂಗಳ ಸ್ನಾನಮಾಡಿ ಅಪೂರ್ವ ವಸ್ತ್ರಭೂಷಣಗಳಿಂದ ಅಲಂಕೃತನಾಗಿ ವಿಪ್ರವರ್ಗಕ್ಕೆ ಷೋಡಶಮಹಾದಾನಗಳನ್ನು ಕೊಟ್ಟು ಶುಭಮುಹೂರ್ತದಲ್ಲಿ ರತ್ನಸಿಂಹಾಸನಾ ರೋಹಣಮಾಡಿದನು. ನಕ್ಷತ್ರ ಸಮೂಹದಿಂದ ರಾರಾಜಿಸುವ ಪೂರ್ಣಚಂದ್ರ ನಂತೆ ಚಂದ್ರಗುಪ್ತನು ರಾಜಮಂಡಲಮಧ್ಯದಲ್ಲಿ ಪೂರ್ಣ ತೇಜಸ್ವಿಯಾಗಿ ಒಪ್ಪುತ್ತಿದ್ದನು. ಅಭಿಷೇಕ ಕಾರ್ಯವು ಶಾಸ್ತ್ರೋಕ್ತವಾಗಿ ನೆರವೇರಿತು. ಮಂಗಳ ವಾದ್ಯಗಳು ಮೊಳಗಿದುವು. ಪುರೋಹಿತರು ಮಂತ್ರಾಕ್ಷತೆಗಳನ್ನು ಎರಚಿದರು. ಸುವಾಸಿನಿಯರು ಮಂಗಳಾರತಿಯನ್ನು ಬೆಳಗಿದರು. ವಂದಿಗಳು ಬಿರುದು ಗಳನ್ನು ಉಗ್ಗಡಿಸಿದರು. ಬಾಗುರಾಯಣನು ಶ್ವೇತಚ್ಛತ್ರಿಯನ್ನು ಹಿಡಿದು ನಿಂತಿರಲು ಭದ್ರಭಟರಾಜಸೇನರು ಧವಳಚಾಮರಗಳನ್ನು ಬೀಸಿದರು. ಆಗ ಅಮಾತ್ಯರಾಕ್ಷಸನು ಚಂದ್ರಗುಪ್ತನನ್ನು ಪುಷ್ಪಗಳಿಂದ ಪೂಜಿಸಿ ರತ್ನಕಾಣಿಕೆ ಗಳನ್ನು ಒಪ್ಪಿಸಿದನು. ಕಾಶೀರಾಜನೇ ಮೊದಲುಗೊಂಡು ಸಕಲ ಸಾಮಂತರೂ ಕಪ್ಪಕಾಣಿಕೆಗಳನ್ನರ್ಪಿಸಿದರು. ಅವರೆಲ್ಲರಿಗೂ ಉಚಿತವಾದ ದಿವ್ಯಭೂಷಣವಸ್ತ್ರ

ಗಂಧಮಾಲ್ಯ ವೀಳೆಯಗಳ ಗೌರವೋಪಚಾರವು ನಡೆಯಿತು. ಸಭಿಕರ ಆನಂದಕ್ಕೆ ಪಾರವೇ ಇರಲಿಲ್ಲ.

ಅದೇ ಲಗ್ನದಲ್ಲಿ ಚಾಣಕ್ಯನು ಅಮಾತ್ಯರಾಕ್ಷಸನ ಅಭಿಮತಾನುಸಾರವಾಗಿ ಸಮಾನರಾಜಕುಲಸಂಜಾತ ಕನ್ಯಾರತ್ನವನ್ನು ಚಂದ್ರಗುಪ್ತನಿಗೆ ಮತ್ತೆ ವಿವಾಹಮಾಡಿಸಿದನು. ಅನಂತರ ಮೌರ್ಯಪುತ್ರನು ಶೃಂಗರಿಸಿದಪಟ್ಟದಾನೆಯ ಮೇಲಿನ ಚಿನ್ನದ ಅಂಬಾರಿಯಲ್ಲಿ ಕುಳಿತನು. ಸಕಲ ರಾಜಮರ್ಯಾದೆಗಳೊಡನೆ ರಾಜಮಂಡಲಪರಿವೃತನಾದ ಚಂದ್ರಗುಪ್ತನ ಮೆರವಣಿಗೆಯು ರಾಜಬೀದಿಗಳಲ್ಲಿ ಮಹಾವೈಭವದಿಂದ ನಡೆಯಿತು. ಚಂದ್ರಗುಪ್ತನಿಗೆ ಪುರಪ್ರಮುಖರು ದಾರಿಯುದ್ದಕ್ಕೂ ಪುಷ್ಪಹಾರಗಳನ್ನು ಒಪ್ಪಿಸಿ ರಾಜಭಕ್ತಿಯನ್ನು ವ್ಯಕ್ತಪಡಿಸಿದರು. ಅಪ್ಸರೆಯರು ಅಂತರಿಕ್ಷದಿಂದ ಪುಷ್ಪವೃಷ್ಟಿಯನ್ನು ಸುರಿಸುವಂತೆ ಉಪ್ಪರಿಗೆಯಲ್ಲಿ ನಿಂತು ಸುಮಂಗಲೆಯರು ಹೂಗಳನ್ನೆರಚಿದರು. ಆಬಾಲವೃದ್ಧರೆಲ್ಲಾ ಆ ರಾಜ್ಯಾಭಿಷೇಕದ ಮೆರವಣಿಗೆಯನ್ನು ಕಣ್ತುಂಬ ಕಂಡು ಹಿಗ್ಗಿದರು.

## ಧರ್ಮೋಪದೇಶ

ಎಲ್ಲಾ ಕಾರ್ಯಗಳೂ ಸಾಂಗವಾಗಿ ನೆರವೇರಿದುವು. ಬಳಿಕ ತಪೋವನಕ್ಕೆ ಹೊರಡಲುದ್ಯುಕ್ತನಾದ ಚಾಣಕ್ಯನಿಗೆ ನಮಸ್ಕರಿಸಿ ಚಂದ್ರಗುಪ್ತನು— ಮಹಾನುಭಾವರೆ, ಅನಾಥನಾಗಿದ್ದ ನನ್ನನ್ನು ಉದ್ಧಾರಮಾಡಿ ರಾಜಾಧಿರಾಜಪದವಿಗೇರಿಸಿದಿರಿ. ನನ್ನ ಭಾಗಕ್ಕೆ ತಾವೇ ಸಾಕ್ಷಾತ್ ದೇವರು. ನಿಮ್ಮನ್ನಗಲಿರುವುದು ನನಗೆ ಅತ್ಯಂತ ಕಷ್ಟಕರವಾದರೂ ತಮ್ಮನ್ನು ನಿರ್ಬಂಧಿಸುವುದಕ್ಕೆ ನಾನು ಸಮರ್ಥನಲ್ಲ. ರಾಜ್ಯಭಾರ ನಿರ್ವಹಣೆಯಲ್ಲಿ ನನಗೆ ಕ್ಷೇಮವುಂಟಾಗುವಂತೆ ತಾವು ನೀತಿರಹಸ್ಯವನ್ನು ಅಪ್ಪಣೆಕೊಡಿಸಬೇಕು—ಎಂದು ಪ್ರಾರ್ಥಿಸಿಕೊಂಡನು.

ಆಗ ಚಾಣಕ್ಯನು ಸಂತೋಷಗೊಂಡು ‘ ಅರಸೆ, ರಾಜಪದವಿಯು ಸುಖದ ಸುಪತ್ತಿಗೆಯಲ್ಲ ; ಮುಳ್ಳಿನ ಹಾಸಿಗೆಯಿದ್ದಹಾಗೆ–ಎಂದು ತಿಳಿ. ಪ್ರಜೆಗಳಿಗೆ ದೊರೆಯು ಹೇಗೆ ದೈವವೋ ಆದರಂತೆ ದೊರೆಗೆ ಪ್ರಜೆಗಳೇ ದೇವರು— ಎಂಬ ನೀತಿಯುಂಟು. ಆದುದರಿಂದ ಅನಾದಿಕಾಲದಿಂದ ನಡೆದುಬಂದಿರುವ ದೇಶಮರ್ಯಾದೆಗಳಿಗೆ ಕೊರತೆಯುಂಟಾಗದಂತೆ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸಿ

ಕೊಂಡು ಧರ್ಮದಿಂದ ರಾಜ್ಯಭಾರಮಾಡು. ಲೋಕಾಪವಾದಕ್ಕೆ ಅಂಜಿ ನೀತಿ ಮಾರ್ಗದಲ್ಲಿ ನಡೆಯುವವನಾಗು. ನ್ಯಾಯಪಕ್ಷಪಾತಿಯಾಗಿರು. ಧರ್ಮಾ ಧರ್ಮಗಳನ್ನು ವಿಮರ್ಶಿಸಿ ತೀರ್ಮಾನಕೊಡು. ದಕ್ಷರಾದ ಅಧಿಕಾರಿಗಳಿಗೆ ಪ್ರೋತ್ಸಾಹಕೊಟ್ಟು ಅಸಮರ್ಥರೂ ಅಯೋಗ್ಯರೂ ಆದವರನ್ನು ದೂರದಲ್ಲಿಡು. ಚಾಡಿಕೋರರ ಸ್ವಾರ್ಥಪರರ ಮಾತಿಗೆ ಕಿವಿಗೊಡಬೇಡ. ಎಲ್ಲಾ ಕಾರ್ಯಗಳಲ್ಲೂ ಜಾಗರೂಕನಾಗಿರು. ವಿದ್ವಾಂಸರಿಗೆ ಆಶ್ರಯವಿತ್ತು ಸಾಧುಗಳಾದ ದೀನಾ ನಾಥರಿಗೆ ಆಧಾರವಾಗಿರು. ನ್ಯಾಯಮಾರ್ಗದಿಂದ ದ್ರವ್ಯವನ್ನು ಭಂಡಾರಕ್ಕೆ ಸೇರಿಸಿ ಅದು ಪ್ರಜಾಪಾಲನೆಗೇ ವಿನಿಯೋಗವಾಗುವಂತೆ ನೋಡಿಕೊ. ಮದ್ಯ, ದ್ಯೂತ ಮೊದಲಾದ ದುರ್ವ್ಯಸನಗಳಿಗೆ ಮನಸೋಲಬೇಡ. ಹೀಗೆ ನೀನು ರಾಜ್ಯಭಾರವನ್ನು ನಿರ್ವಹಿಸುತ್ತಿದ್ದರೆ ನಿನಗೆ ಶತ್ರುಗಳ ಭಯವಿರುವುದಿಲ್ಲ. ಪ್ರಜೆ ಗಳು ನಿನ್ನನ್ನು ಪೂಜಿಸುವರು. ಸಾಮ್ರಾಜ್ಯಲಕ್ಷ್ಮಿಯು ಸ್ಥಿರವಾಗಿ ನಿನ್ನಲ್ಲಿ ನಿಲ್ಲುವಳು. ದೇಶವು ಸಮೃದ್ಧವಾಗಿ ಲೋಕಕ್ಕೆ ಕ್ಷೇಮವುಂಟಾಗುವುದು.' ಎಂದು ಅನೇಕ ವಿಧವಾದ ನೀತಿವಾಕ್ಯಗಳನ್ನು ಚಂದ್ರಗುಪ್ತನಿಗೆ ಉಪದೇಶಿ ಸಿದನು.

ಆಗ ಅಮಾತ್ಯರಾಕ್ಷಸನು ಚಾಣಕ್ಯನ ಮಿತ್ರನಾದ ಇಂದುಶರ್ಮನನ್ನೂ ಅವನ ಶಿಷ್ಯರನ್ನೂ ಉಚಿತ ರೀತಿಯಲ್ಲಿ ಸತ್ಕರಿಸಿ, ಚಾಣಕ್ಯನು ಹೊರಡಲು ರಥವನ್ನು ಸಿದ್ಧಪಡಿಸುವಂತೆ ಬಾಗುರಾಯಣನಿಗೆ ಆಜ್ಞಾಪಿಸಿದನು. ಚಾಣಕ್ಯನು ಎಲ್ಲರ ನಮಸ್ಕಾರಗಳನ್ನೂ ಸ್ವೀಕರಿಸಿ ರಥವನ್ನು ಹತ್ತಿದನು. ಚಂದ್ರಗುಪ್ತನೂ ಅಮಾತ್ಯನೂ ಚಾಣಕ್ಯನ ಸಂಗಡ ಹೊರಟರು. ಸಕಲ ರಾಜಮರ್ಯಾದೆಗಳೊಡನೆ ಚಾಣಕ್ಯನು ಪುರದ್ವಾರವನ್ನು ದಾಟಿದನು. ಆಗ ಚಂದ್ರಗುಪ್ತನು ಪರಿವಾರ ವನ್ನು ಹಿಂದಕ್ಕೆ ಕಳುಹಿಸಿ ಅಮಾತ್ಯನೊಡನೆ ಚಾಣಕ್ಯನನ್ನು ಹಿಂಬಾಲಿಸಿ ನೈಮಿಶಾರಣ್ಯವನ್ನು ತಲುಪಿದನು. ಅಲ್ಲಿ ಇಂದುಶರ್ಮನ ಮನೆಯಲ್ಲಿ ತಂಗಿದ್ದು ಅವನ ಆತಿಥ್ಯವನ್ನು ಸ್ವೀಕರಿಸಿ ಚಾಣಕ್ಯನನ್ನು ಆಶ್ರಮದಲ್ಲಿ ಬಿಟ್ಟು ಆಶೀ ರ್ವಾದವನ್ನು ಪಡೆದು ಅಮಾತ್ಯನೊಡನೆ ಪಟ್ಟಣಕ್ಕೆ ಹಿಂದಿರುಗಿದನು.

ಅಮಾತ್ಯನ ಸಲಹೆಯಂತೆ ಚಾಣಕ್ಯನ ಪರ್ಣಶಾಲೆಯಿದ್ದ ಕಡೆ ದೇವಾಲಯವನ್ನು ಕಟ್ಟಿಸಿ ಶ್ರೀ ಲಕ್ಷ್ಮೀನರಸಿಂಹ ದೇವರನ್ನು ಪ್ರತಿಷ್ಠೆಮಾಡಿಸಿ ಆ ದೇವರ ಸನ್ನಿಧಿಯಲ್ಲಿ ವಿಷ್ಣುಶರ್ಮನ ವಿಗ್ರಹವನ್ನು ಪ್ರತಿಷ್ಠಿಸಿ ಅಲ್ಲಿ ನಿತ್ಯವೂ

ಪೂಜೋತ್ಸವಗಳು ನಡೆಯುವಂತೆ ಏರ್ಪಾಡುಮಾಡಿದನು. ಅಮಾತ್ಯರಾಕ್ಷಸನು ಮೊದಲಿನಂತೆ ಪ್ರಧಾನ ಮಂತ್ರಿಪದವಿಯಲ್ಲಿ ನಿರತನಾಗಿರಲು ಚಂದ್ರಗುಪ್ತನ ಆಡಳಿತದಲ್ಲಿ ಪ್ರಜೆಗಳು ನೆಮ್ಮದಿಯಿಂದಿದ್ದರು. ದೇಶವು ಮಳೆಬೆಳೆಗಳಿಂದ ಸಮೃದ್ಧವಾಗಿ ಸುಭಿಕ್ಷವಾಗಿತ್ತು.

## ಅಭ್ಯಾಸ

ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಷಯದ ಹೆಗ್ಗುರುತುಗಳನ್ನು ಉಪಯೋಗಿಸಿಕೊಂಡು ಉತ್ತಮ ಪ್ರಬಂಧ ಬರೆಯಿರಿ.

೧. **ಅಮಾತ್ಯ ಚಾಣಕ್ಯರ ಸಮಾಗಮ**

1. ವಸಂತವನದಲ್ಲಿ
2. ಪಶುಲೋಮ ವೃತ್ತಾಂತ
3. ಶೂಲಸ್ಥಾನದೆಡೆ
4. ಚಾಣಕ್ಯನ ಪರ್ಣಶಾಲೆಯ ಬಳಿಗೆ

೨. **ಚಂದ್ರಗುಪ್ತನ ಪಟ್ಟಾಭಿಷೇಕ**

1. ಪಟ್ಟಾಭಿಷೇಕದ ಸಿದ್ಧತೆ
2. ರಾಜ್ಯಾಭಿಷೇಕದ ವೈಭವ
3. ಪ್ರಾಧಾನ್ಯಶಸ್ತ್ರಸ್ವೀಕಾರ
4. ಚಾಣಕ್ಯರ ಧರ್ಮೋಪದೇಶ

'ಚಾಣಕ್ಯನ ವ್ಯಕ್ತಿತ್ವ' ಎಂಬ ವಿಷಯವಾಗಿ ಒಂದು ಲೇಖನ ಬರೆಯಿರಿ

---

## ಗ್ರಂಥ ಋಣ

1. **ಮುದ್ರಾ ಮಂಜೂಷ**—ಕೆಂಪುನಾರಾಯಣಕವಿ.
2. **ಮುದ್ರಾ ರಾಕ್ಷಸ**—ಸಂಸ್ಕೃತನಾಟಕ ವಿಶಾಖದತ್ತಕವಿ.
3. **ಕನ್ನಡ ಕವಿಚರಿತೆ**—ಆರ್. ನರಸಿಂಹಾಚಾರ್.
4. **ಸಂಸ್ಕೃತ ಕವಿಚರಿತ್ರೆ**—ಶ್ರೀನಿವಾಸಯ್ಯಂಗಾರ್.

# ಕಠಿಣ ಶಬ್ದಾರ್ಥ

| ಪದ | ಅರ್ಥ | ಪುಟ |
|---|---|---|
| ಬಂಧವಿಮೋಚನೆ | ಸೆರೆಯಿಂದ ಬಿಡುಗಡೆ | 1 |
| ದಿಗಂಗನೆ | ದಿಕ್ಕೆಂಬ ಹೆಂಗಸು. | |
| ದುಕೂಲ | ಹೊದಿಯುವ ರೇಷ್ಮೆವಸ್ತ್ರ. | |
| ಸೊಡರು | ದೀಪ. | |
| ಪಾದಪ್ರಕ್ಷಾಳನ | ಕಾಲುತೊಳೆಯುವುದು. | 2 |
| ಷೋಡಶೋಪಚಾರ | ಹದಿನಾರು ಬಗೆಯ ಉಪಚಾರಗಳು. | |
| ಫಣಾಮಣಿ | ಹೆಡೆಯಲ್ಲಿರುವ ರತ್ನ | 3 |
| ಚಂದ್ರಿಕೆ | ಬೆಳದಿಂಗಳು. | 10 |
| ಮೃಗಯಾವಿಹಾರ | ಬೇಟೆ | 11 |
| ಶವಗಂಧಭೂಯಿಷ್ಠ | ಹೆಣದ ಅಧಿಕ ದುರ್ವಾಸನೆಯಿಂದ ಕೂಡಿದ. | 11 |
| ದುರಂತ | ಪರಿಣಾಮ ಕೆಟ್ಟದಾಗುವ, ದುರ್ಮರಣ. | 14 |
| ಉಪಾಸಕ | ಸೇವೆಮಾಡುವವ, ಭಕ್ತ. | 18 |
| ವಿಡಂಬನ | ಪರಿಹಾಸ್ಯ. | |
| ತಿಲೋದಕ | ಎಳ್ಳುನೀರು. | 21 |
| ಮೂಲೋತ್ಪಾಟನೆ | ಬೇರುಸಹಿತ ಕಿತ್ತು ಹಾಕುವುದು. | |
| ಪ್ರತ್ಯವಾಯ | ಅಪವಾದ. | 29 |
| ಪರ್ಯವಸಾನ | ಕೊನೆ, ಮುಗಿತಾಯ. | 30 |
| ಮಧುಕರ | ದುಂಬಿ. | 39 |
| ನಿರೂಪ | ಆಜ್ಞೆ. | 42 |
| ಪ್ರದೋಷಕಾಲ | ಸಂಜೆ, ರಾತ್ರಿಯಾಗುವ ಮೊದಲು. | 57 |
| ಅಂದಣ | ಪಲ್ಲಕ್ಕಿ. | 60 |
| ರಾವುತ | ಕುದುರೆ ಸೈನಿಕ. | 61 |
| ನಿಶಿತ | ಹರಿತವಾದ. | 62 |
| ಆಕರ್ಣಾಂತ | ಕಿವಿಯವರೆಗೆ. | |

| | |
|---|---|
| ಆಕ್ರಂದನ—ಗೋಳಾಟ. | 63 |
| ವರಣಮಾಲೆ—ವಿವಾಹಕಾಲದಲ್ಲಿ ಕನ್ಯೆ ವರನಿಗೆ ಹಾಕುವ ಮಾಲೆ. | 64 |
| ಪಾರಿತೋಷಿಕ—ತೃಪ್ತಿಗೊಳಿಸುವ ಬಹುಮಾನ. | 67 |
| ಅರ್ಥಾಂತರ—ಬೇರೊಂದು ಅರ್ಥ. | 68 |
| ಉಪದ್ರವ—ತೊಂದರೆ. | 75 |
| ಪಾಚಕ—ಅಡಿಗೆಯವನು. | |
| ವಾನಪ್ರಸ್ಥ—ಅರಣ್ಯದಲ್ಲಿ ಕಾಲಕಳೆಯುವುದು. | 76 |
| ಚಮೂಪತಿ—ಸೇನಾಪತಿ. | 80 |
| ಪ್ರಚ್ಛನ್ನ—ಗುಪ್ತ, ವೇಷ ಬದಲಿಸಿದ. | 82 |
| ಧೌತಾಂಬರ—ಒಗೆದು ಶುಭ್ರವಾದ ಬಟ್ಟೆ. | 85 |
| ಕಳತ್ರ—ಹೆಂಡತಿ. | 87 |
| ವಣಿಜ—ವರ್ತಕ. | 88 |
| ಕೌಮುದಿ—ಬೆಳದಿಂಗಳು, ಕಾರ್ತಿಕ ಹುಣ್ಣಿಮೆ. | 91 |
| ಉಕ್ಕಡ—ಪಟ್ಟಣದ ಹೊರಗಿನ ಕಾವಲುಮನೆ, ಸುಂಕದ ಮನೆ. | 92 |
| ಮಂಜೂಷ—ಪೆಟ್ಟಿಗೆ. | 95 |
| ಅಂಗುಲೀಯ—ಉಂಗುರ. | |
| ವೈತಾಳಿಕ—ಹೊಗಳುಭಟ್ಟ. | 96 |
| ಲಾಂಛನ—ಗುರುತು. | 98 |
| ಉಂಡಿಗೆ—ಹೋಗಿಬರಲು ಪಡೆಯುವ ಗುರುತು, ಪಾಸು. | 101 |
| ಕಶಾಪ್ರಹಾರ—ಚಾಟಿ ಏಟು. | 106 |
| ಗಿರಿತರಂಗಿಣಿ—ಬೆಟ್ಟದ ಹೊಳೆ. | 115 |
| ಆಚಂದ್ರಾರ್ಕ—ಚಂದ್ರಸೂರ್ಯರಿರುವವರೆಗೆ | 118 |
| ಕೋವಿದ—ವಿದ್ವಾಂಸ, ಪಂಡಿತ. | 127 |
| ಸೂನೃತವಾಕ್ಯ—ಸತ್ಯವೂ ಹಿತವೂ ಆದ ಮಾತು. | 130 |
| ಕೌಂಗು—ಅಡಿಕೆ. | 134 |
| ಉಗ್ಗಡಿಸು—ಪರಾಕುಹೇಳು. | ,, |

# ಶುದ್ಧಾಶುದ್ಧ ಪತ್ರಿಕೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| 70 | 20 | ನಿಸಗೆ | ನಿಮಗೆ |
| 85 | 12 | ಕರೆ ತರು ಂತೆ | ಕರೆತರುವಂತೆ |
| 87 | 14 | ತಕು | ತಕ್ಕ |
| 88 | 2 | ಶಿಷ್ಕ | ಶಿಷ್ಯ |
| 98 | 6 | ಸ್ನು | ಇಸ್ನು |
| ,, | 26 | ವಿ ೋಧಿ | ವಿರೋಧಿ |
| 99 | ,, | ಸುಸಮಯವೆಂದ | ಸುಸಮುಯುವೆಂದೂ |
| 100 | 2 | ವನನ್ನೇ | ಅವನನ್ನೇ |
| ,, | 23 | ತೌರು ನೆಗೆ | ತೌರುಮನೆಗೆ |
| 101 | 16 | ತೆಳಿರದಸು | ತೆರಳಿದನು |
| 104 | 4 | ಕದಡಿ | ಕದಡಿದ |
| 105 | 14 | ಶ್ರೀಮತು | ಶ್ರೀಮತ್ |
| 106 | 26 | ಅಮಾತ್ಯರಾಕ್ಷಸನು | ಅಮಾತ್ಯರಾಕ್ಷಸರು |
| 109 | ,, | ಮತ್ತೊಬ | ಮತ್ತೊಬ್ಬ |
| 110 | 21 | ಮಾಡಿರಬೆ ಕು | ಮಾಡಿರಬೇಕು |
| 111 | 4 | ಕೊಲ್ಲಿಸಿ | ಕೊಲ್ಲಿಸಿದ |
| ,, | 15 | ವೇಘನಾದ | ಮೇಘನಾದ |
| ,, | 21 | ರಾಕ್ಪಸ | ರಾಕ್ಷಸ |
| 112 | 12 | ಸಿಡಾರ್ಥಕ | ಸಿದ್ಧಾರ್ಥಕ |
| ,, | 20 | ಆಭರಣಗಳೆ ದರೇನು | ಆಭರಣಗಳೆಂದರೇನು |
| 116 | 12 | ಅಂದಣವನು | ಅಂದಣವನ್ನು |
| 121 | 12 | ಪ್ರಾರ್ಥನೆಯಲ್ಲಾ | ಪ್ರಾರ್ಥನೆಯೆಲ್ಲಾ |
| 124 | 7 | ಅ ನ | ಅವನ |
| ,, | 26 | ಬದಕ ವುದು | ಬದಕುವುದು |

X Standard Kannada Non-Detailed Text Book
(1962-63)

*For*

*Mysore, Mandya, South Canara and Coorg districts*

PRICE: **94** nP.

Printed at Super Printers, Bangalore
11000 Copies Paper used 26 lb W. P.